# ಝುಕ್ ಝುಕ್ ಭಯ್ಯಾ
# ತಾಲಮ್ ತಾಲ್

## (ಮಕ್ಕಳ ನಾಟಕ)

ಸ್ಯಾಕರ್ ಲಾಕ್ ಎಂಡ್ ಮಿಕಿನಿಕಿ ಎಂಬ ಜರ್ಮನ್ ಮಕ್ಕಳ ನಾಟಕದ
ಕನ್ನಡ ರೂಪಾಂತರ

ಗೋನವಾರ ಕಿಶನ್‌ರಾವ್






ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ ರಾಜ್ಯ

Chuk Chuk Bhaiyya Talam Tal : (Kannada) Adaptation of children's play by
Gonvar Kishan Rao, 4-50, Vikas Nagar Colony, Dilsukh Nagar,
Hyderabad 500 036;
Printed at : RIND Rural Press Project SAGAR 577 401 ;
Published by Akshara Prakashana, Heggodu
(Sagara), Karnataka 577 417; First Edition 1994



ಬೆಲೆ : ಹದಿನೈದು ರೂಪಾಯಿಗಳು

# ಕೃತಜ್ಞತೆ

ಈ ನಾಟಕವನ್ನು ಅನುವಾದಿಸಲು ಪ್ರೇರೇಪಿಸಿದ ದಿ। ವಾಸುದೇವ ರಾವ ಕಪಟರಾಳರಿಗೆ, ಶ್ರೀಯುತರುಗಳಾದ, ವರ್ಕೂರ ಶ್ರೀನಿವಾಸರಾವ್, ಡಾ। ಬಿ.ಟಿ. ದೇಸಾಯಿ, ಡಾ. ಕೆ.ವಿ. ತಿರುಮಲೇಶ, ಪವನಕುಮಾರ ಮಾನ್ವಿ, ಹೆಚ್.ಕೆ. ಅನಂತರಾವ್ ಇವರುಗಳಿಗೆ,

ಪಲ್ಲಣ್ಣ ಅಪ್ಪು, ಶ್ರೀರಾಮ್, ಗೋವಿಂದ, ಶ್ರೀಕಾಂತ, ಎಸ್.ಡಿ. ಕುಮಾರ, ಗುರುಪ್ರಸಾದ, ರಾಮಮೂರ್ತಿ ಮುಂತಾದ ಸಾಹಿತ್ಯ ಮಂದಿರ, ಅನ್ವೇಷಕರು ತಂಡದ ಸದಸ್ಯರುಗಳಿಗೆ,

ನೆಮ್ಮದಿಯಿಂದ ಬರೆಯಲು ಬಿಟ್ಟ ಅರ್ಧಾಂಗಿ ಅಂಬುಜಾ, ಮಕ್ಕಳು ಅಮೋಘ, ಕೃತಿಯರಿಗೆ,

ಹಸ್ತಪ್ರತಿ ಓದುತ್ತಿದ್ದಂತೆ ಪ್ರದರ್ಶಿಸಲು, ಪ್ರಕಟಿಸಲು ಉತ್ಸುಕರಾದ ನೀನಾಸಂ, ಅಕ್ಷರ ಪ್ರಕಾಶನದವರಿಗೆ, ಪೂಜ್ಯ ಸುಬ್ಬಣ್ಣನವರಿಗೆ ಹಾಗೂ ಶ್ರೀ ಕೆ.ವಿ. ಅಕ್ಷರ ಇವರಿಗೆ,

— ಲೇಖಕ / ಅನುವಾದಕ



ಅರ್ಪಣೆ

ತೀ॥ರೂ॥ ತಂದೆಯವರು ಹಾಗೂ

ರಾ॥ರಾ॥ ಶ್ರೀಮಾಮಾ ಇವರಿಗೆ

# ಅಂತರಂಗ

ಸಾಹಿತ್ಯ ಎಂದರೆ, ಬರೀ ಕಾದಂಬರಿಗಳು ಎಂದು ನಾನು ನಂಬಿದ್ದ ಕಾಲವೊಂದಿತ್ತು. ಯಾವಾಗಲೂ ಒಂದು ಸ್ಥಳದಿಂದ, ಇನ್ನೊಂದು ಸ್ಥಳಕ್ಕೆ ಪ್ರಯಾಣಿಸುತ್ತಲೇ ಇರುವ, ಇನ್ನೂ ಮದುವೆ, ಮಕ್ಕಳು ಎನ್ನುವ ಬಂಧನವಿರದ ಆ ಏಕಾಂತದ ಆದರೆ ಅನೇಕ ಕನಸುಗಳಿಂದ ತುಂಬಿದ ಆ ದಿನಗಳಲ್ಲಿ ಕಾದಂಬರಿಗಳೇ ನನ್ನ ಸಂಗಾತಿಗಳು. ೧೫ ವರ್ಷಗಳ ಹಿಂದೆ ಇರಬೇಕು ಹೈದರಾಬಾದಿಗೆ ಬಂದೆ. ಸಂಚಾರಿ ಉದ್ಯೋಗಕ್ಕೆ ವಿದಾಯ ಹೇಳಿ, ಸ್ಥಾಯಿಯಾಗಿ ನೆಲೆ ನಿಂತಾಗ, ನನ್ನೊಳಗೆ ಇರುವ ವಿವಿಧ ಹವ್ಯಾಸಗಳಿಗೆ ಒಂದು ನಿಶ್ಚಿತ ದಿಶೆ ಕಲ್ಪಿಸಿದ್ದು ಸಾಹಿತ್ಯ ಮಂದಿರ. ಅನ್ವೇಷಕರು ತಂಡ. ಕಾದಂಬರಿಗಳಾಚೆ ಕಾವ್ಯ ಇವೆ, ನಾಟಕಗಳಿವೆ, ವಿಮರ್ಶೆ– ಚಿಂತನೆಗಳಿವೆ ಎನ್ನುವ ಮಗ್ಗಲು ಗೋಚರವಾದಾಗ, ಉಂಟಾದ ಖುಷಿ ಸಾಹಿತ್ಯದಲ್ಲಿ ಆಳವಾಗಿ ಇಳಿಯುವಂತೆ ಪ್ರೇರೇಪಿಸುವುದರ ಜೊತೆಗೆ, ಕನ್ನಡದಲ್ಲಿಯೇ ಸ್ನಾತಕೋತ್ತರ ಪದವಿ ಪಡೆಯುವ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸಂಶೋಧನೆಗೆ ಇಳಿಯುವುದಕ್ಕೆ ಕಾರಣವಾಯಿತು. ಸಾಹಿತ್ಯ ಮಂದಿರ, ಅದರ ವಾರ್ತಾ ಪತ್ರಿಕೆಯಾದ ಪರಿಚಯವನ್ನು ಸಂಪಾದಿಸುವಂತಹ ಜವಾಬ್ದಾರಿಯನ್ನು ಹೊರಿಸಿದಾಗ, ನನ್ನ ಬರವಣಿಗೆಗೆ ಒಂದು ರೂಪ ಬಂದಿತು. ಅನ್ವೇಷಕರು, ಈ ಕೆಳಗಿನವರು, ರಾಜಾರಾಣಿ ಕಥೆ, ಹಕ್ಕಿ ಹಾರುತಿದೆ ನೋಡಿದಿರಾ, ಮುಂತಾದ ನಾಟಕಗಳನ್ನು ಪ್ರದರ್ಶನಕ್ಕೆ ಅಳವಡಿಸಲು ತಯಾರಿ ನಡೆಸಿದಾಗ, ಸಹಜವಾಗಿ ಎಂಬಂತೆ ನಾನು ಸಕ್ರಿಯವಾಗಿ ಭಾಗವಹಿಸಿದೆ. ದಿ। ವಾಸುದೇವರಾವ್ ಕಪಟರಾಳರ ಸಂಪರ್ಕ ಉಂಟಾಗಿದ್ದು ಈ ಸಂದರ್ಭದಲ್ಲಿ. ಅವರೇ ಸ್ವಯಂ ಈ ಮಕ್ಕಳ ನಾಟಕದ ಹಿಂದೀ ರೂಪಾಂತರದ ಹಸ್ತಪ್ರತಿಯನ್ನು ತಂದುಕೊಟ್ಟು ಭಾಷಾಂತರಿಸಲು ಕೇಳಿದ್ದು, ಒಂದೇ ಉಮೇದಿನಲ್ಲಿ ಭಾಷಾಂತರಿಸಿದೆ. ಈ ಮಧ್ಯೆ ಅನೇಕ ಸಂಗತಿಗಳು ನಡೆದವು. ಕಪಟರಾಳರಿಗೆ ಹಸ್ತಪ್ರತಿಯನ್ನು ಓದಿ ತೋರಿಸುವುದಕ್ಕೆ ಆಗಲೇ ಇಲ್ಲ. ಒಂದು ದಿನ ಬೆಳಿಗ್ಗೆ ಅವರು ಹಟಾತ್ತನೆ ನಿಧನರಾದರು ಎಂದು ತಿಳಿದು ಮನಸ್ಸಿಗೆ ಸಂಕಟವಾಯಿತು. ನಂತರದ ದಿನಗಳಲ್ಲಿ ಹಸ್ತಪ್ರತಿಯ ಬಗ್ಗೆ ಮರೆತೂ ಹೋಯಿತು. ಕಳೆದ ವರ್ಷ ನೀನಾಸಂ ತಂಡ ಹೈದರಾಬಾದಿಗೆ ಬಂದು ತಿರುಗಾಟದ ಪ್ರದರ್ಶನಗಳನ್ನು ಅಭಿನಯಿಸಿದಾಗ, ಈ ಸಂಗತಿ ಮರುಕಳಿಸಿ, ಹುಡುಕಿ ತೆಗೆದು ಶ್ರೀ ಅಕ್ಷರ ಅವರಿಗೆ ಬರೆದೆ. ಹಸ್ತಪ್ರತಿ ಕಳುಹಿಸಿ ಎನ್ನುವ ಸೂಚನೆ ಬಂದಾಗ ಸುಯೋಗವೆಂಬಂತೆ ಒದಗಿದ ಬೇಸಿಗೆಯ ರಜೆಗಳನ್ನು ಇದಕ್ಕಾಗಿಯೇ ಉಪಯೋಗಿಸಿ, ತಿದ್ದಿ, ಶುದ್ಧಪ್ರತಿ ತಯಾರಿಸಿ, ಅದರ ನಕಲು ಮಾಡಿ ಕಳುಹಿಸಿದೆ. ಒಂದು ವಾರದಲ್ಲಿಯೇ ನಾಟಕ ಬಹಳ ಚೆನ್ನಾಗಿದೆ, ಪ್ರದರ್ಶನಕ್ಕೆ ಅಳವಡಿಸುತ್ತೇವೆ, ಮುದ್ರಣಾಲಯದ ಅನುಕೂಲ ನೋಡಿಕೊಂಡು ಅಕ್ಷರ ಪ್ರಕಾಶನದ ಮೂಲಕ ಮುದ್ರಿಸುತ್ತೇವೆ ಎನ್ನುವ ಪತ್ರ ಅಕ್ಷರ ಅವರಿಂದ ಬಂದಾಗ ಉಂಟಾದ ಖುಷಿ,

ಗೆಳೆಯರುಗಳು ಪಟ್ಟ ಸಂಭ್ರಮ, ಇತ್ಯಾದಿಗಳು ದಿ। ಕಪಟರಾಳರನ್ನು ನೆನಪಿಗೆ ತಂದುಕೊಟ್ಟವು.

ಈ ನಾಟಕದ ಬಗ್ಗೆ ನಾನು ಹೆಚ್ಚಿಗೆ ಏನನ್ನೂ ಹೇಳಲು ಇಷ್ಟಪಡುವುದಿಲ್ಲ. ಅನುವಾದ ಸಾಹಿತ್ಯ ಸೃಜನಶೀಲ ಸೃಷ್ಟಿಯಾಗಬಲ್ಲದೇ? ಆಗಲಾರದೇ ಎನ್ನುವಂತಹ ಸಂಶಯಗಳು ನನ್ನಲ್ಲಿ ಇದ್ದವು. ಆದರೆ ಹಿರಿಯ ಸ್ನೇಹಿತ ಪೂಜ್ಯ ಡಾ। ಬಿ.ಟಿ. ದೇಸಾಯಿಯವರು ರೂಪಾಂತರಿಸಿದ 'ಈ ಕೆಳಗಿನವರು' ನಾಟಕ ಕಂಡ ಯಶಸ್ಸು ನನ್ನ ಈ ಸಂಶಯವನ್ನು ಬಹಳ ಮಟ್ಟಿಗೆ ನಿವಾರಿಸಿದವು. ಮಕ್ಕಳ ನಾಟಕಗಳ ಕೊರತೆ ಇರುವ ನಮ್ಮ ಭಾಷೆಯಲ್ಲಿ, ಇದನ್ನು ಒಂದು ಸೃಷ್ಟಿ ಎಂದು ಪರಿಗಣಿಸದೇ, ರಂಗಪ್ರದರ್ಶನಕ್ಕೆ ಯೋಗ್ಯವಾದ ಪರಿಕರಗಳನ್ನು ಹೊಂದಿಸಿ ಕೊಡುವ ಒಂದು ಅಂಗವಾದರೆ ಸಾಕು, ಇದರ ಯಶಸ್ಸು, ಅಪಯಶಸ್ಸುಗಳು ನಿರ್ದೇಶಕರ, ಪ್ರೇಕ್ಷಕರ ಕೈಯಲ್ಲಿ. ಭರತಮುನಿ ನಾಟ್ಯ ಶಾಸ್ತ್ರದಲ್ಲಿ ಹೇಳುವ "ಭಾವಾನುಭಾವ ವಿಭಾವ..................'' ಉಕ್ತಿಯಂತೆ, ಉತ್ಪತ್ತಿಯಾಗುವ ರಸದ ಕಿಂಚಿತ್ತು ಇದರಲ್ಲಿ ಕಾಣಿಸಿದರೆ ಸಾಕು.

ಪ್ರಕಟಿಸಿದ ಅಕ್ಷರ ಪ್ರಕಾಶನದವರಿಗೂ, ಹಸ್ತಪ್ರತಿಯಲ್ಲಿ ಆಸಕ್ತಿ ತೋರಿಸಿ, ಇದಕ್ಕೆ ಗ್ರಂಥರೂಪ ಕಲ್ಪಿಸಿದ ಶ್ರೀ ಅಕ್ಷರ ಇವರಿಗೆ ನನ್ನ ಕೃತಜ್ಞತೆಗಳು.

ಹೈದರಾಬಾದ — ಗೋನವಾರ ಕಿಶನ್‌ರಾವ್

೧೫–೦೮–೧೯೯೩

# ಪಾತ್ರಗಳು

## (ಪ್ರವೇಶಾನುಕ್ರಮದಲ್ಲಿ)

೧. ಭಿಕ್ಕು, ನಿಕ್ಕಿಮಿಕ್ಕಿ
೨. ಚುನ್ನು
೩. ಮುನ್ನು
೪. ಛುಕ್, ಛುಕ್ ಭಯ್ಯಾ
೫. ಚಿಡ, ಚಿಡದಾಸ (ಗೋಪನಲಾಲ)
೬. ಮಾಸ್ತರ
೭. ಮಾಸ್ತರಿಣಿ
೮. ವಿದ್ಯಾರ್ಥಿ
೯. ಮೋಟುಮಲ್
೧೦. ಪೇಡಾ
೧೧. ರಸಗುಲ್ಲಾ
೧೨. ಜಿಲೇಬಿ
೧೩. ಪ್ರೊಫೆಸರ್
೧೪. ಮೀರಾ
೧೫. ಟಿಕ್ಕು
೧೬. ಚಿಕ್ಕು
೧೭. ಹುಡುಗ –೧
೧೮. ಹುಡುಗ –೨
೧೯. ಮುದುಕಿ

ಸೂ :– ಅಲ್ಲಲ್ಲಿ ಬರುವ ಹಾಡುಗಳ ಅನುವಾದವನ್ನು ಕೊನೆಯಲ್ಲಿ ಸೇರಿಸಿದೆ.

# ಛುಕ್, ಛುಕ್ ಭಯ್ಯಾ ತಾಲಮ್ ತಾಲ

## ದೃಶ್ಯ – ೧

(ನಾಟಕದ ಪ್ರಾರಂಭದಲ್ಲಿ ಒಳಗಿನಿಂದ ಭಿಕ್ಕಿಯ ಕೂಗು)

ಭಿಕ್ಕಿ : ನೀವು ಇಬ್ಬರೂ, ನನ್ನ ಒಬ್ಬಳನ್ನೇ ಮಾಡಿ ಗೋಳಾಡಿಸ್ತಾ ಇದೀರಿ, ನೀವು ಅಂಜುಬುರುಕರು.

ಚುನ್ನು : ಬೇಕೂಫ್ ಹುಡುಗಿ, ಈಗರ ನಮಗ ಸಿಕ್ಕಿದ್ದಿ, ಇನ್ನ ಬಿಡೋಹಂಗಿಲ್ಲ.

ಮುನ್ನು : ನಿನ್ನ ಈಗ ಹೊಡೀತೀವಿ, ಬಿಡತೀವಿ ಏನು?

ಭಿಕ್ಕಿ : (ನಗುತ್ತ) ನೀವಿಬ್ಬರೂ ಮೂರ್ಖರು (ರಂಗದ ಮೇಲೆ ಓಡಾಡುತ್ತ, ಕುಣಿದಾಡುತ್ತ ಪ್ರವೇಶಿಸುತ್ತಾಳೆ. ಹಿಂದಿನಿಂದ ಚುನ್ನು ಮುನ್ನು ಸಹ ಬರುತ್ತಾರೆ. ಮೂರೂ ಜನ ಜಗಳವಾಡುತ್ತಿದ್ದಾರೆ) ಸಾಕಪ್ಪ ಸಾಕು ಇನ್ನು ಜಗಳ ಸಾಕು. ಈಗ ಎಲ್ಲರೂ ಸೇರಿ ರೈಲಿನ ಆಟ ಆಡೋಣ. ಅರೇ, ಅರೆ, ಇದೇನೋ ಇದು, ಕುಕ್, ಕುಕ್ ಅಂತೀಯಲ್ಲ! ತಪ್ಪು ತಪ್ಪು ಛುಕ್ ಛುಕ್ ಅನ್ನಬೇಕು.

ಚುನ್ನು : ಹುಚ್ಚಿ, ಹುಚ್ಚಿ, ನಾನೇ ಸರಿ, ಕುಕ್, ಕುಕ್, ಕುಕ್,

ಮುನ್ನು : ಹೌದು ಕುಕ್, ಕುಕ್, ಕುಕ್.

ಭಿಕ್ಕು : ನಿನಗೇನು ಗೊತ್ತು ಇಂಜನ್ ಧ್ವನಿ ಹ್ಯಾಂಗ ಇರತದಂತ.

ಮುನ್ನು : ನಮಗೆಲ್ಲ ಗೊತ್ತು. ನಿನಗ್ಯಾಕ ರೈಲಿನಾಟ, ಹೋಗಿ ನಿನ್ನ ಗೊಂಬಿಗಳು ಜೊತಿ ಆಡು.

ಭಿಕ್ಕು : ಊಹೂಂ! ನಾ ಇವತ್ತು ರೈಲಗಾಡಿ ಆಟ ಆಡೇ ತೀರಬೇಕು. ನೀವು ಬಂದ್ರೆ ಬರ್ರಿ, ಇಲ್ಲಂದ್ರ ಬಿಡ್ರಿ. ನಾ ಬ್ಯಾರೆ ಯಾರಿಗಾರ ಕರೀತೀನಿ. (ಪ್ರೇಕ್ಷಕರ ಕಡೆ ತಿರುಗಿ) ಏನ್ರಿ ನಿಮ್ಮಲ್ಲಿ ನನ್ನ ಜತಿಗೆ ರೈಲುಗಾಡಿ ಆಟ ಆಡಲಿಕ್ಕೆ ಯಾರು ಬರುತೀರಿ.

ಚುನ್ನು : ತಕ್ಕಳಪ್ಪ, ಸಿಟ್ಟು ಮೂಗಿನ ಮ್ಯಾಲೆ ಅದ ಇಕಿಗೆ. ಇಷ್ಟುಸಣ್ಣ ಸಣ್ಣ ಮಾತಿಗೆ ಸಿಟ್ಟಾದ್ರ ಹೆಂಗ! ಇರಲಿ ಬಾ ಇಲ್ಲಿ ನೋಡು, ನಾ ತೋರಸ್ತೀನಿ. ರೈಲ ಇಂಜನ್ ಹೆಂಗ ಇರತದ ಅಂತ.

ಭಿಕ್ಕು : ಹೂಂ! ತನಗಾ ಗೊತ್ತಿಲ್ಲ ನನಗ ತೋರಸ್ತಾನಂತ.

ಮುನ್ನು : ನಮಗ ಖರೇ, ಖರೇ ಗೊತ್ತದ.

ಭಿಕ್ಕು : ನಿಮಗೇನೂ ಗೊತ್ತಿಲ್ಲ, ಯಾವಾಗ ನೋಡಿದರೂ ಗಡಬಡ ಮಾಡತೀರಿ, ನೀವಿಬ್ಬರೂ ಧಡ್ಡಹುಡುಗರು.

ಚುನ್ನು : ಒಂದು ಕಪಾಳಕ್ಕ ಹೊಡೆದನಂದರೆ,

ಭಿಕ್ಕು : ಆಹಾ! ನನಗ ಹೊಡಿತಾನಂತ, ಹೊಡಿ ನೋಡೋಣ. ಎಷ್ಟು ಧೈರ್ಯ ಅದ ನಿನಗ. (ಛುಕ್ ಛುಕ್ ಭಯ್ಯಾ ಬರುತ್ತಾನೆ. ಆದರೆ ಯೂನಿಫಾರ್ಮ್‌ನಲ್ಲಿ ಇರುವುದಿಲ್ಲ)

ಟುಕ್ ಟುಕ್ ಭಯ್ಯಾ : ರಾಮ ರಾಮಾ, ಏನು ಇದು? ಎಷ್ಟು ಗದ್ದಲ ಮಾಡಲಿಕ್ಕೆ ಹತ್ತೀರಿ?

ಭಿಕ್ಕು : ಮತ್ತ...... ಮತ್ತ...... ಇವರು..... ಇವರಿಬ್ಬರೂ....... ಇವರಿಬ್ಬರೂ........ ಏನ್........ ಮಾಡಿದರು......... ಅಂದ್ರ......

ಟುಕ್, ಟುಕ್ : ಹಂಗೆಲ್ಲ ಚಾಡಿ ಹೇಳಬಾರದು.

ಭಿಕ್ಕು : ಚಾಡಿ ಅಲ್ಲ, ನಾನು ಇಂಜನ್ ಹೆಂಗ ಧ್ವನಿ ಮಾಡತದ ಅಂತ ತೋರಿಸಿದೆ, ಇವರು ಅಲ್ಲ ಅನ್ನಲಿಕ್ಕೆ ಹತ್ಯಾರ.

ಚುನ್ನು : ಬರೋಬ್ಬರಿ ಅಂತೀವಿ. ಇಂಜನ್ ಸುದ್ದಿ ಹುಡಿಗಿ ತಲೆಗೆ ಹೋಗಲಿಕ್ಕೆ ಸಾಧ್ಯನೇ ಇಲ್ಲ.

ಮುನ್ನು : ಮತ್ತ ಇಕಿ, ಈ ಬಿಕ್ಕು ಇದ್ದಾಳಲ್ಲ, ಯಾವಾಗಲೂ ತಾನು ಮಾಡಿದ್ದ ಶ್ರೇಷ್ಠ, ತಾ ಆಡಿದ್ದೇ ಖರೇ ಅಂತ ತಿಳಿತಾಳ.

ಭಿಕ್ಕು : ಒಂದು ವೇಳೆ ನಾ ಆಡಿದ್ದೇ ಖರೇ ಇದ್ರ.......

ಚುನ್ನು : ನೀನು ಹುಚ್ಚು ಹುಡುಗಿ.

ಭಿಕ್ಕು : ಮತ್ತ ನೀನು, ನೀನು ಧಡ್ಡ........

ಟುಕ್, ಟುಕ್ : ಹಿಂಗ ಜಗಳ ಆಡಿದ್ರೆ ನನಗ ಸಿಟ್ಟ ಬರತದ. ನಾ ಹೋಗಿ ಬಿಡಿತೀನಿ (ಹೋಗಲು ತಿರುಗುತ್ತ) ಇಲ್ಲಿ ಕೇಳ್ರಿ, ರೈಲು ಹಿಂಗ್ ಹೋಗತದ, ಟುಕ್, ಟುಕ್, ಟುಕ್, ಟುಕ್,.......

ಭಿಕ್ಕು : ನೋಡರಲೇ, ನಾನು ತೋರಿಸಿದ್ದು ಇದೇರೀತಿ.

ಚುನ್ನು : ಆರೇ ಸ್ವಲ್ಪ ತಡಿ ಭಿಕ್ಕು, ಅಲ್ರಿ ಇದು ಹೀಂಗ ಇರತದ ಅಂತ ನೀವು ಹೆಂಗ ಹೇಳಲಿಕ್ಕೆ ಸಾಧ್ಯ?

ಟುಕ್, ಟುಕ್ : ಯಾಕಂದ್ರ, ನನ್ನ ಹೆಸರು ಅದೇ ಅದ. ಟುಕ್, ಟುಕ್ ಭಯ್ಯಾ ತಾಲಮ್ ತಾಲ.

ಮೂರೂ ಜನ : (ನಗುತ್ತ) ಆಹಾ! ಟುಕ್, ಟುಕ್ ಭಯ್ಯಾ, ತಾಲಮ್ ತಾಲ ಟುಕ್, ಟುಕ್ ಭಯ್ಯಾ ತಾಲಮ್ ತಾಲ್.

ಟುಕ್, ಟುಕ್ : ಅಂದಂಗ ನಿಮ್ಮ ಮೂರೂ ಮಂದಿ ಹೆಸರು ಏನು?

ಚುನ್ನು : ಚುನ್ನು (ಖೊಕ್, ಖೊಕ್ ನಗುತ್ತಾನೆ)

ಮುನ್ನು : (ಒಮ್ಮೆಲೇ) ಮುನ್ನು (ನಗುತ್ತಾನೆ)

ಟುಕ್, ಟುಕ್ : ಮತ್ತ ನಿನ್ನ ಹೆಸರೇನಮ್ಮ?

ಭಿಕ್ಕು : ನಿಕ್ಕಿಭಿಕ್ಕಿ......

ಟುಕ್, ಟುಕ್ : (ಗಂಭೀರವಾಗಿ) ಹೂಂ ನಿಕ್ಕಿಭಿಕ್ಕಿ....... ಮತ್ತ ನಿಮಗ ಒಂದು ಮಾತು ಹೇಳತೀನಿ ಕೇಳ್ರಿ, ರೈಲಿನ ಬಗ್ಗೆ ನನಗ ಎಷ್ಟು ಗೊತ್ತದ ಅಂದ್ರ ಈ ಜಗತ್ತಿನಾಗ ಇರೋ ಎಲ್ಲಾ ಹುಡುಗರನ್ನು ಕರೆಸಿದರೂ ಅವರಿಗೆಷ್ಟು ಗೊತ್ತಿರತದೋ ಅದರಕ್ಕಿಂತ ಸ್ವಲ್ಪ ಜಾಸ್ತಿ.

ಭಿಕ್ಕು : (ಪ್ರೇಕ್ಷಕರಿಗೆ) ಏನ್ರಿ, ಹಿಂಗ ಆಗಲಿಕ್ಕೆ ಸಾಧ್ಯ ಅದ ಅಂತೀರಿ?

ಟುಕ್, ಟುಕ್ : ಸುಮ್ಮನೆ ಹೇಳಿದ್ರ ನಿಮಗ ತಿಳೀಲಿಕ್ಕೆ ಸಾಧ್ಯ ಇಲ್ಲ. ಸ್ವಲ್ಪ ತಡೀರಿ. (ಒಳಗೆ ಹೋಗಿ

ಒಂದು ಪರದೆ ತಂದು ತೋರಿಸುತ್ತಾನೆ. ಅದರಲ್ಲಿ ಇಂಜನ್ ಸಹಿತ ರೈಲಿನ ಚಿತ್ರ ಇರುತ್ತದೆ) ಈಗ ಹೇಳ್ರಿ ಇದು ಏನು?

ಮೂವರೂ : ಅರೇ, ಟುಕ್ ಟುಕ್ ಗಾಡಿ!!

ಟುಕ್, ಟುಕ್ ಇದು, ಇದು ಟುಕ್, ಗಾಡಿ, ಇಂಜನ್ (ಉಸಿರುಗರೆದು) ಒಂದಾನೊಂದು ಕಾಲದಾಗ, ಇಂಜನ್ ಅಂದ್ರ ಹೀಂಗ ಇರತಿತ್ತು (ಕಣ್ಣು ಒರೆಸಿಕೊಳ್ಳುತ್ತಾನೆ)

ಭಿಕ್ಕು : (ಪಿಸು ದನಿಯಲ್ಲಿ) ಅರೆ, ಇವ, ಅಳಲಿಕ್ಕೆ ಹತ್ತಾನ ನೋಡು.

ಟುಕ್, ಟುಕ್ (ದುಃಖಿಸುತ್ತಾ) ನನ್ನ ಹೆಸರು, ಅರೆ, ಅಲ್ಲ, ನನ್ನ ಹೆಸರು, ಟುಕ್ ಟುಕ್ ಭಯ್ಯಾ ತಾಲಮ್ ತಾಲ ಅದ.

ಚುನ್ನು : ನಿನ್ನ ಇಂಜನ್ ನೋಡಿದ್ರ ಮಜಾ ಅದ ಆಗ್ಲಿ, ಇದರಾಗ ನೀ ಅಳೋ ಅಂತದ ಏನ್ ಅದ.

ಮೂವರೂ : ಏನ ಕಾರಣರೀ, ಟುಕ್ ಟುಕ್ ಭಯ್ಯಾ.

ಟುಕ್, ಟುಕ್ ಏನಂತ ಹೇಳ್ಲಿ ಮಕ್ಕಳೇ, ಅದೊಂದು ದೊಡ್ಡ ಮುಗಿಲಾರದ ಕಥಿ ಆಗಿ ಕೂತದ. ಇಲ್ಲಿ ಕೂತು ಮಂದಿ, ಪಾಪ ಅವರಿಗೆ ಯಾಕ ನನ್ನ ದುಃಖ ಹೇಳಬೇಕು, ಪಾಪ ಅವರು ನಕ್ಕು, ಖುಷಿಪಟ್ಟು ಹೋಗಲಿಕ್ಕೆ ಬಂದಾರ.

ಭಿಕ್ಕು : ಟೇ, ಟೇ, ಹೇಳರೆ ಹೇಳು, ನಮ್ಮ ಕೈಯಿಂದ ಆದ ಸಹಾಯ ಮಾಡತೀವಿ, ನಿನ್ನ ದುಃಖ ಕಡಿಮೆ ಆಗಲಿಕ್ಕೆ ಸಾಧ್ಯ ಅದನ ಹೆಂಗ ನೋಡಣ.

ಟುಕ್, ಟುಕ್ ಆದರೆ, ಈ ಇಂಜನ್ ನೆನಪಾದ ಕೂಡಲೇ, ನನ್ನ ಕಣ್ಣು ತುಂಬಿ ಬರತಾವ, ನೋಡಿಲ್ಲಿ.

ಚುನ್ನು : ಟೇ, ಟೇ, ಅಳಬ್ಯಾಡ್ರಿ ಅಂಕಲ್ (ಕರಚೀಪ್ ಕೊಡುತ್ತಾ) ಇದನ್ನ ತೋಗೋರಿ, ಕಣ್ಣ ಒರಿಸಿಗೋರಿ.

ಭಿಕ್ಕು : ಥೂ ನಿನ್ನ ಹಾಳಾಗ, ಏನು ಹೊಲಸದಸ್ತಿ ಇಟ್ಟೆದ್ದಿ ಮಾರಾಯ, (ಅದನ್ನು ಎಸೆದು, ಸ್ವಚ್ಛವಾದದ್ದು ಕೊಡುತ್ತ) ಅಂಕಲ್, ಈ ದಸ್ತಿ ತೋಗೊರಿ.

ಮುನ್ನು : ಇದರಲೇ ಬೇಕಾರೆ, ನೀವು ಮೂಗೂ ಸಹಿತ, ಸ್ವಚ್ಛ ಮಾಡಬಹುದು. (ಮೂಗು ಒರೆಸುತ್ತಾನೆ)

ಭಿಕ್ಕು : ಇನ್ನ ನಿಮ್ಮ ಕಥಿ ಶುರು ಮಾಡ್ರಿ.

ಟುಕ್, ಟುಕ್ ಶುರು ಮಾಡಲ್ಯಾ ಹಂಗಾರ, ಕೇಳ್ರಿ ಈ ಟುಕ್ ಟುಕ್ ಅನ್ನೋ ಹೆಸರಿನ, ಒಂದು ಪುಟ್ಟ ಮುದ್ದಾದ ರೈಲು ಇಂಜನ್ ಇತ್ತು. ಮತ್ತ ನಾನು, ನಾನು ಅದರ ಡ್ರೈವರ್ ಇದ್ದೆ.

ಮೂವರೂ : (ಆಶ್ಚರ್ಯದಿಂದ) ಇಂಜನ್ ಡ್ರೈವರ್, ಖರೇ, ಖರೇ ಇಂಜನ್ ಡ್ರೈವರ್......

ಟುಕ್, ಟುಕ್ ಹಾಂ, ಹಾಂ, ಖರೇ, ಖರೇ, ಇಂಜನ್ ಡ್ರೈವರ್. ಆದರೆ ಏನು ಪ್ರಯೋಜನ, ಈಗ ಆ ಕಾಲ ಮುಗದು ಹೋಗೇದ.

ಚುನ್ನು : ಯಾಕ? ಏನಾಯ್ತು? ಇಂಜನ್‌ಗಳಿಗೆ ಸಾವೇ ಇಲ್ಲಲ್ಲ!

ಟುಕ್, ಟುಕ್ : ಆದರೆ, ಆದರೆ, ನನ್ನ ಇಂಜನ್‌ನ್ನ, ನನ್ನ ಕಡಿಂದ ಕಿತ್ತುಕೊಂಡು (ಅಳುತ್ತ) ಆದನ್ನು ತುಂಡು, ತುಂಡು ಮಾಡಿ ಹಾಕಿದರು (ಜೋರಾಗಿ ಅಳುತ್ತಾನೆ)

ಭಿಕ್ಕು : ಭಯ್ಯಾ ಅಳಬ್ಯಾಡ್ರಿ..... ನೀವು ಅತ್ತರೆ ನನಗೂ ಅಳು ತಡೀಲಿಕೆ ಆಗಂಗಿಲ್ಲ (ಅಳುತ್ತಾಳೆ)

ಚುನ್ನು : ನೀವಿಬ್ಬರೂ ಸಾಕುಕಮಾಡ್ರಿ (ಎಂದು ಅಳುತ್ತಾನೆ.)

ಮುನ್ನು : (ಅಳುತ್ತ) ನೀವೆಲ್ಲ ಯಾಕ್ ಅಳಲಿಕ್ಕ ಹತ್ತೀರಿ.

ಟುಕ್, ಟುಕ್ : ಮತ್ತ ನಾ ನಿಮಗೆ ಆಗ್ಗೇ ಹೇಳಿದ್ದ ನೋಡು. ಇದು ಬಹಳ ದುಃಖದ ಕತಿ ಅಂತ.

ಭಿಕ್ಕು : ಇರ್ಲಿ, ಇರ್ಲಿ. ಸಮಾಧಾನ ಮಾಡಿಕೊಂಡು ಹೇಳ್ರಿ. ಈ ನಿಮ್ಮ ಟುಕ್, ಟುಕ್ ಇಂಜನ್ನನ್ನ ಯಾರು ಕದ್ದರು.

ಟುಕ್, ಟುಕ್ : ಕದಿಯೋದು ಅಲ್ಲ, ಕಿತ್ತಿಕೊಂಡು.....

ಚುನ್ನು : ಎಲ್ಲಾ ಒಂದೇ.........

ಟುಕ್, ಟುಕ್ : ಇಲ್ಲ ಬಹಳ ಫರಕ್ ಅದ, ಅವಾ ಎಲ್ಲಾರ ಎದುರಿಗೆ ಎಳಕಂಡು ಹೋದ.

ಮೂವರೂ : ಯಾರು?

ಟುಕ್, ಟುಕ್ : ಅವನೇ, ಶೇಠ, ಚಿಡ್, ಚಿಡ್‌ದಾಸ್. ನನ್ನ ಮಾಲೀಕ.

ಭಿಕ್ಕು : ನಿಮ್ಮ ಮಾಲೀಕ.

ಚುನ್ನು : ಅವನ ಹೆಸರು ಏನಂದ್ರಿ? ಚಿಡ್. ಚಿಡ್‌ದಾಸಾ?

ಟುಕ್, ಟುಕ್ : ಹೌದು ಆದೇ, ಈ ನಮ್ಮ ಇಂಜನ್ ಒಂದೇ ಅಲ್ಲ, ಎಲ್ಲಾ ಇಂಜನ್‌ಗಳು, ಗಾಡಿಗಳು ಅವನವೇ ಅವ.

ಚುನ್ನು : ಆದೇನೋ ಸರಿ, ಆದರೆ ಇಂವ ಇಂಜನ್ನ ತುಂಡು ಮಾಡಿದ್ದು ಯಾಕ?

ಟುಕ್, ಟುಕ್ : ನನಗ ಶಿಕ್ಷೆ ಕೊಡಲಿಕ್ಕೆ. ನಾನು ಈ ಇಂಜನ್ನಿನ್ನ ಬಹಳ ಪ್ರೀತಿ ಮಾಡತೀನಿ ಅಂತ ಅವನಿಗೆ ಗೊತ್ತಿತ್ತು. (ದುಃಖಿಸುತ್ತಾನೆ)

ಮುನ್ನು : ಇದರಾಗ ಏನು ತಪ್ಪು ಆದ. ಅವ ನಿಮಗೆ ಶಿಕ್ಷೆ ಕೊಡಲಿಕ್ಕೆ ಏನು ಕಾರಣ?

ಟುಕ್, ಟುಕ್ : ನಾನು ಆಗಾಗ, ಇದರಮ್ಯಾಲೆ ಸಣ್ಣ ಸಣ್ಣ ಮಕ್ಕಳನ್ನ ಫ್ರೀಯಾಗಿ ಕೂಡಿಸಿ, ಸುತ್ತಾಡಸ್ತಿದ್ದೆ ಆದಕ್ಕೆ. (ಅಳುತ್ತಾನೆ)

ಭಿಕ್ಕು : ಮಕ್ಕಳನ್ನ ಫ್ರೀ ಕೂಡಿಸಿ ಅಡ್ಡಾಡೋದು ಏನು ದೊಡ್ಡ ಅಪರಾಧ ಏನು? (ತಲೆ ಅಲ್ಲಾಡಿಸುತ್ತಾನೆ) ಇದು ಬಹಳ ಅನ್ಯಾಯ ಅದ.

ಟುಕ್, ಟುಕ್ : ಸಣ್ಣ ಸಣ್ಣ ಮಕ್ಕಳು, ಇದರ ಮ್ಯಾಲೆ ಕೂತು ಹಾಡು ಹಾಡ್ತಾ ಹೋಗ್ತಾ ಇದ್ದರೆ, ನನಗೆ ಬಹಳ ಸಂತೋಷ ಆಗುತ್ತಿತ್ತು.

(ರೈಲುಗಾಡಿ ಹಾಡು)

ಈಗ ಆದಿವಸ ನೋಡೋಣಂದ್ರ ಇಲ್ಲ. ಸಿಗೋ ಹಾಂಗೂ ಇಲ್ಲ. (ಪರದೆ ತೆಗೆದು ಮಡಚಿಕೊಳ್ಳುತ್ತಾನೆ. ಮಕ್ಕಳಲ್ಲಿ ಚಿಡ್‌ಚಿಡ್‌ದಾಸ್ ಬಗ್ಗೆ ಅಸೂಯೆ ಬೆಳೆಯುತ್ತದೆ)

ಭಿಕ್ಕು : ಈ ನಿಮ್ಮ ಸೇಠ ಇರೋ ಸ್ಥಳ ಯಾವುದು?

ಟುಕ್, ಟುಕ್ : ಮತ್ತೆಲ್ಲಿ? ಆವನ ವರ್ಕ್‌ಶಾಪಿನಾಗ, ಮೊದಲು ಅಂವ ರೈಲುಗಾಡಿಗಳ ಸಲುವಾಗಿ ಅಲ್ಲಿ ಮಾಡಬೇಡಿ, ಇಲ್ಲಿ ತಿನ್ನಬೇಡಿ, ಹಾಡಬೇಡಿ, ಬಾರಿಸಬೇಡಿ, ಅದು ಇದೂ ಅಂತ ಬೋರ್ಡ್ ಬರೆಸಿ ಇಡತಿದ್ದ– ಢೋಂಗಿ – ಅಲ್ಲಿ ನಗಬಾರದು, ಅಳಬಾರದು, ಓಡಬಾರದು, ಬಿಸಿಲಿನಾಗ ತಿರುಗಬಾರದು, ನೀರಿನಾಗ ಆಡಬಾರದು, ಹಂಗ ನೋಡಿದ್ರ ಅಲ್ಲಿ ಯಾರೂ ಏನೂ ಮಾಡಲೇಬಾರದು. ಊರಮಂದಿ ಹಂಗೇನಾರ ಆವನ ಮಾತ ಕೇಳತಿದ್ರು ಅಂದ್ರ ಎಲ್ಲಾರ ಮನಿವಳಗ ಸಹಿತ ಈ ಕ್ರಮ ಜಾರಿಗೆ ತರೋ ಮಗ ಅಂವ.

ಚುನ್ನು : ಮತ್ತೇನು ಮಾಡತಾನ.

ಟುಕ್, ಟುಕ್ : ಇನ್ನೇನು ಮಾಡಬೇಕು ಇದ ಸಾಕಲ್ಲ!

ಭಿಕ್ಕು : ನಾವು ಒಂದು ಕೆಲಸ ಮಾಡಣ. ಎಲ್ಲಾರೂ ಆವನ ಮನಿಗೆ ಹೋಗೋಣ.

ಚುನ್ನು : ಅಲ್ಲಿ ಹೋಗಿ ಏನ ಮಾಡಲಿಕ್ಕೆ ಸಾಧ್ಯ.

ಭಿಕ್ಕು : ಅಲ್ಲಿಂದ ಈ ನಮ್ಮ ಭಯ್ಯಾನ ಇಂಜನ್ ತಂದು ರಿಪೇರಿ ಮಾಡಿಸಿಕೊಡು ಅಂತ ಕೇಳಣ.

ಚುನ್ನು : ಕೊಡು ಅಂದ್ರ ಕೊಟ್ಟು ಬಿಡತಾನ್ ಏನು? ನಮ್ಮನ್ನ ಒದ್ದು ಹೊರಗ ಹಾಕತಾನ್.

ಭಿಕ್ಕು : ಪ್ರಯತ್ನ ಮಾಡಿ ನೋಡೋಣ.

ಚುನ್ನು : ನಾ ಒಲ್ಲೆ ಮಹರಾಯಳೆ.

ಭಿಕ್ಕು : ಥೂ ಅಂಜುಬುರುಕ! ನಿಮಗ ಅಂಜಿಕೆ ಆದ್ರ ಬಿಡ್ರಿ, ನಾನು ಒಬ್ಬಳೇ ಹೋಗತೀನಿ.

ಚುನ್ನು : ಆಹಾ! ಒಬ್ಬಳೇ ಹೋಗೋ ಮುಖನೋಡು. ನಡೀ ಮುನ್ನು ಹೋಗೋಣ.

ಮುನ್ನು : ಹಾಂಗ ಬರ್‍ರಿ ಹಾದಿಗೆ (ಹಾಡುತ್ತ ಹೋಗುವರು)

## ದೃಶ್ಯ – ೨

(ಒಂದು ಕರಿಹಲಗೆಯ ಎದುರಿಗೆ ನಿಂತು ಏನನ್ನೋ ಬರೆಯುತ್ತಿರುವ ಸೇಠ ಚೆಡ್, ಚೆಡ್‌ದಾಸ. ಸುತ್ತಮುತ್ತ ಅದು ಮಾಡಬೇಡಿ, ಇದು ಮಾಡಬೇಡಿ ಎನ್ನುವ ಫಲಕಗಳು ಬಿದ್ದಿವೆ. ಹಿನ್ನೆಲೆಯಲ್ಲಿ ಹುಡುಗರು ರೈಲಿನ ಹಾಡು ಹಾಡುವ ಧ್ವನಿ ಕೇಳಿ ಮುಖ ಸಿಟ್ಟಿನಿಂದ ಕೆಂಪಾಗುತ್ತದೆ)

ಚೆಡ್. ಚೆಡ್‌ದಾಸ : ಟುಕ್, ಟುಕ್ ಹಾಡು ಮತ್ತ ಶುರು ಆಯ್ತು ಕಾಣಸ್ತದ. ಈ ತಾಲಮ್ ತಾಲನ ಕಿರಿಕಿರಿ ಗಾಡಿ, ಇಂಜನ್ ಎರಡೂ ಕಿತ್ತಿಗೊಂಡು ಕಳಿಸಿದ್ರೂ, ಮತ್ತ ಬಂದಾನ ಮಗ. (ಹುಡುಗರು ಬರುತ್ತಾರೆ) ಖಾಮೋಷ್! ಯಾರು ನೀವು? ಏನಬೇಕು? ಇಲ್ಲಿ ಹಾಡದು, ಬಾರಸದು ಬಂದ್, ಅಂತ ನಿಮಗ ಗೊತ್ತಿಲ್ಲೇನು? ಸುಮ್ಮನಾಗ್ರಿ

(ಮಕ್ಕಳು ಸುಮ್ಮನೆ ಆಗುವರು)

ಭಿಕ್ಕು : ಸುಮ್ಮನೇನು ಆಗ್ತೀವಿ ಆದರೆ ನಾವು ಕೇಳಿದ್ದಕ್ಕ........

ಚಿಡ್, ಚಿಡ್ : ಈ ಹುಡುಗರು ಕಾಲಾಗ ಸಾಕಾಗೆದ. ಬರೇ ಕೇಳದು, ಕೇಳದು. ಇಲ್ಲಾ ಅದು ತೋರಿಸು, ಇದು ತೋರಿಸು ಅಂತ್ಹ ಜೀವಾ ಹಿಂಡದು. ಇವರಿಗೆ ಕೇಳಿದ್ದ ತೋರಿಸಿ, ಕೊಡಿಸಿ ಸಾಕಾಗಿ ಹೋಗ್ತದ. ಇವ ತಮ್ಮಷ್ಟಕ್ಕ ತಾವು ಏನಂತ ತಿಳಿದುಕೊಂಡಿದ್ದಾವ. ನಮುಗ ಇರೋ ಅರ್ಜಂಟ್ ಸಾವಿರಾರು ಕೆಲಸಗಳಾಗ, ಇವರ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಪುರಸತ್ತು ಎಲ್ಲಿ ಇರತದ (ಎಂದು ವಟಗುಟ್ಟುತ್ತ ಬರೆಯಲು ಪ್ರಾರಂಭಿಸಿ) ಪ್ರಶ್ನೆ ಕೇಳುವುದು ತಪ್ಪು. ತಿಳಿದುಕೊಳ್ಳಿ.

ಮುನ್ನು : ಆದರ.............

ಚಿಡ್, ಚಿಡ್ : ಈ ಆದರ ಅಂತ ಶುರು ಮಾಡೋ ಮಾತು ಸಹ ಬಂದ್.

ಭಿಕ್ಕು : ನೀವು (ಹೇಳುತ್ತ ಬರೆಯುತ್ತ) ನೀವು ಬ್ಯಾಡ ಅನ್ನದು ಸಹ ತಪ್ಪು...... ತಿಳಿತೋ....... ಇಲ್ಲೊ.

ಚಿಡ್, ಚಿಡ್ : ನನ್ನ ಮುಂದ ನಿಮ್ಮ ಜಿದ್ದು ನಡಿಲಿಕ್ಕೆ ಸಾಧ್ಯ ಇಲ್ಲ.

ಭಿಕ್ಕು : ಯಾಕ ಸಾಧ್ಯ ಇಲ್ಲ. ಸಾಧ್ಯ ಅದ ಜರೂರು ಸಾಧ್ಯ ಅದ. ಓದಲಿಕ್ಕೆ ಸಾಧ್ಯ ಇಲ್ಲೇನು? ಚಿಡ್ ಚಿಡ್‌ದಾಸ ನೀ ಹೀಂಗ ಮಾಡಬ್ಯಾಡ ಮನಿಶ್ಯಾ.

ಚಿಡ್, ಚಿಡ್ : ಮಾಡಬ್ಯಾಡ ಅಂದ್ರ ನಾಯೇನ್ ಮಾಡ್ಲಿ, ಹೊಟ್ಟೆಗೆ ಕೇರು ಹಾಕಿಕೊಳ್ಳಬೇಕಾಗತದ. ಅನ್ಯಾಯ ಇದು.

ಚುನ್ನು : ಯಾವದು ಅನ್ಯಾಯ? ಈ ನಮ್ಮ ಟುಕ್, ಟುಕ್ ಭಯ್ಯಾನ ಸಂಗ್ತೀ ನೀ ಮಾಡಿದ್ದು ಏನು ಹಂಗಾರೆ?

ಮುನ್ನು : ಸುಳ್ಳೇ ಏನೇನೋ ಅಪವಾದ ಹೊರಿಸಿದ್ದಿ ಆತನ ಮ್ಯಾಲೆ.

ಚಿಡ್, ಚಿಡ್ : ನನ್ನ ಇಂಜನ್, ನನ್ನ ಗಾಡಿ, ಏನ ಬೇಕಾದ್ರ ಮಾಡತೀನಿ.

ಚುನ್ನು : ಏನ ಬೇಕಾದ್ರ ಅಂದ್ರ, ಅದನ್ನು ಮುರಿಲಿಕ್ಕೆ ಸಾಧ್ಯ ಇಲ್ಲ.

ಚಿಡ್, ಚಿಡ್ : ಯಾರಂತಾರ, ನಾ ಅದನ್ನ ಮುರೀತೀನಿ ಅಂತ, ಸುಮ್ಮನೆ ಅದರ ನಟ್ಟು ಬೋಲ್ಟ ಸಡ್ಲ ಮಾಡಿ ಇಟ್ಟೀನಿ.

ಮುನ್ನು : ಎಲ್ಲಾ ಒಂದೇ ಹಣೆಬರಹ. ಇಂಜನ್ ಅಂತೂ ಮುರದು ಹೋಯಿತಲ್ಲ.

ಚಿಡ್, ಚಿಡ್ : ಎಲ್ಲಾ ಒಂದೇ ಹಂಗ ಆಗ್ತದ, ನಾಳೆ ಯಾರರ ಹೊಸ ಬೋಲ್ಟ ನಟ್ ತಂದು ಸರಿಯಾಗಿ ಜೋಡಿಸಿದ್ರೆ ಇಂಜನ್ ಮತ್ತ ಚಾಲೂ ಆಗ್ತದ. ಹಾಂ. ಆದರ ಅದು ನಿಮ್ಮ ಕೈಯಲ್ಲಿ ಸಾಧ್ಯ ಇಲ್ಲ. ನಿಮ್ಮಲ್ಲಿ ಅಷ್ಟು ಶಕ್ತೀನೂ ಇಲ್ಲ ತಿಳೀತೇನು?

ಭಿಕ್ಕು : ಯಾಕ ಸಾಧ್ಯ ಇಲ್ಲ, ಟುಕ್ ಟುಕ್ ಭಯ್ಯಾ ನಮ್ಮ ಜತೀಗೆ ಇದ್ದನಂದ್ರ ಎಲ್ಲಾ ಸಾಧ್ಯ ಅದ, ಜರೂರು ಸಾಧ್ಯ ಅದ.

ಚಿಡ್, ಚಿಡ್ : ಯಾರು, ಆ ತಾಲಮ್ ತಾಲನ, ಅಂವ ಏನು ಮಾಡತಾನ್? ನಾನು ಈ ಇಂಜನ್

ಎಲ್ಲಿ ಇಟ್ಟೇನಿ ಅಂತ ಹುಡುಕಲಿಕ್ಕೆ ನಿಮಗಾಗಲೀ, ಅವನಿಗಾಗಲೀ ಸಾಧ್ಯ ಇಲ್ಲ.

ಮುನ್ನು : ಒಂದು ವೇಳೆ ನಾವು ಅದನ್ನು ಹುಡುಕಿ ತಗದರ್......

ಚಿಡ್, ಚಿಡ್ : ಸಾಧ್ಯನೇ ಇಲ್ಲ, ನಾನು ಈ ಇಂಜನ್‌ನ ತುಂಡು ತುಂಡು ಮಾಡಿ ಇಡೀ ಜಗತ್ತಿನ ಮೂಲಿ ಮೂಲಿ ಒಳಗ ಇಟ್ಟೇನಿ. ಕೆಲವೊಂದು ದೇಶದ ಜನರಿಗೆ ಈ ರೈಲುಗಾಡಿ ಏನು ಅಂದ್ರ ಗೊತ್ತಿಲ್ಲ. ಅಂತಾ ಜಾಗದಾಗ ಇಟ್ಟೇನಿ. ಹೀಂಗಾಗಿ ನೀವು ಅದನ್ನ ಹುಡಕಲಿಕ್ಕೆ ಸಾಧ್ಯನೇ ಇಲ್ಲ.

ಚುನ್ನು : ಆದ್ರೂ ಒಂದು ವೇಳೆ ಹುಡುಕಿ ತೆಗಿತೀವಿ ಅಂತ ತಿಳಿರಿ, ಹುಡುಕಿ, ಸರಿ ಜೋಡಸ್ತೀವಿ ಆಗ............

ಚಿಡ್, ಚಿಡ್ : ಆಗ, ಅದನ್ನು ನಾ ನಿಮಗ, ಬಹುಮಾನ ಅಂತ ಕೊಟ್ಟು ಬಿಡತೀನಿ. ಮತ್ತ ಅಷ್ಟೇ ಅಲ್ಲ, ನಾ ಇಲ್ಲಿ ಬರದು ಇಟ್ಟ ಬೋರ್ಡುಗಳನ್ನ ಸಹ ಅಳಿಸಿ ಹಾಕತೀನಿ.

ಭಿಕ್ಕು : ಬೇಡ ಎನ್ನುವುದು ಬೇಡ – ಇದನ್ನ ಮಾತ್ರ ಬೇಡ, ಅದು ಹಂಗೇ ಇದ್ರ ಚಲೋ. (ಮೆಲ್ಲಗೆ ಚುನ್ನುವಿಗೆ) ಹೋಗು ಹೋಗಿ, ಭಯ್ಯಾನನ್ನು ಜಲ್ದಿ ಕರೆದುಕೊಂಡು ಬಾ (ಚುನ್ನು ಹೋಗುತ್ತಾನೆ)

ಮುನ್ನು : ನಾವು ಇಂಜನ್ನನ್ನು ಎಲ್ಲೆಲ್ಲಿ ಹುಡುಕಲಿಕ್ಕೆ ಸಾಧ್ಯ ಅಂತ ಹೇಳ್ರಿ ಸಾಕು, ಆಮ್ಯಾಲೆ ಈ ಬೋರ್ಡು ಅಳಿಸೋ ಕೆಲಸ ನಾವೇ ಮಾಡತೀವಿ.

ಚಿಡ್, ಚಿಡ್ : ಎಲಾ ಇವನ, ನನಗೆ ತಿರುಮಂತ್ರ ಹಾಕತೀರಿ. ಇಲ್ಲಿ ನನ್ನ ಮುಂದೆ ನಿಮ್ಮ ಶಾಣ್ಯಾತನ ನಡಿಲಿಕ್ಕೆ ಸಾಧ್ಯ ಇಲ್ಲ. (ಎಂದು ಒಂದು ದೊಡ್ಡ ಬ್ರಷ್ ತೆಗೆದುಕೊಂಡು) ನೀವು ಬರೆದದ್ದು ಮೊದಲು ಅಳಿಸಿರಿ (ಮಕ್ಕಳನ್ನು ಹೊಡೆಯಲು ಬರುತ್ತಾನೆ, ಅದೇ ಸಮಯಕ್ಕೆ ಟುಕ್, ಟುಕ್, ಚುನ್ನುವಿನ ಪ್ರವೇಶ)

ಟುಕ್, ಟುಕ್ : ರಾಮರಾಮ ಶೇಠ ಸಾಹೇಬ (ಕೈಯಲ್ಲಿರುವ ಬ್ರಷ್ ಕಿತ್ತಿಕೊಂಡು) ಇಷ್ಟು ದೊಡ್ಡ ಬ್ರಷ್‌ನಿಂದ ಏನು ಮಾಡ್ತಾ ಇದ್ದೀರಿ. ಚಿಡ್ ಚಿಡ್‌ದಾಸ ಸಾಹೇಬರೇ.

ಚಿಡ್, ಚಿಡ್ : ಓ, ನೀನಾ..... ಬ್ರಷ್...... ಬ್ರಷ್ ಜತಿಗೆ...... ನಿನಗ ಗೊತ್ತಿರಬೇಕಲ್ಲ..... ನಾನು ಈ ಬ್ರಷ್ ಜತಿಗೆ...... ನಾನು ಏನು, ಹೇಳಬೇಕಂತ ಮಾಡಿದ್ದೆ ಅಂದ್ರೆ.

ಮುನ್ನು : ಇವರು ಏನು ಹೇಳಬೇಕಂತ ಮಾಡಿದ್ದರು ಅಂದ್ರ ಮತ್ತ ನಮ್ಮನ್ನ.....

ಭಿಕ್ಕು : ಬ್ಯಾಡ, ಹೇಳ ಬ್ಯಾಡ.

ಚಿಡ್, ಚಿಡ್ : ಹಾಂ, ನಾನು, ಈ ಹುಡುಗರಿಗೆ, ಈ ಬ್ರಷ್‌ನಿಂದ ಬೋರ್ಡು ಮ್ಯಾಲೆ ಹ್ಯಾಂಗ ಬರೀಬೇಕು ಅಂತ ಕಲಿಸಬೇಕು ಅಂತ ಮಾಡಿದ್ದೆ..... ಹೀಂಗ (ಗಾಳಿಯಲ್ಲಿ ಬರೆಯುತ್ತಾನೆ)

ಟುಕ್, ಟುಕ್ : ಹೀಂಗಾ...... (ಆಕಡೆ ಈ ಕಡೆ ನೋಡಿ) ಓಹೋ ಬೇಡ ಎನ್ನುವುದು ಬೇಡ ವಾಹ್! ಅಂತೂ ಒಂದು ಬೋರ್ಡು ಆದರೂ ಚಲೋ ಮಾತ ಹೇಳತದ. ಇದನ್ನ ನೀವು ಬರದೀರಿ ಏನು?

ಚಿಿಡ್, ಚಿಡ್ : ಇಲ್ಲ ಧಣೇರ, ಇದನ್ನ ನಿಮ್ಮ ಈ ಮುದ್ದಿನ ಮಕ್ಕಳು ಬರದಾರ. ದೊಡ್ಡ ಅಪರಾಧ! ಬೇಡ ಎನ್ನುವುದು ಬೇಡ ಅಂದ್ರ ನನ್ನ ಗತಿ ಏನು? ಈ ಮೂರ್ಖರಿಗೆ ಇದನ್ನ ಅಳಿಸಿ ಹಾಕಲಿಕ್ಕೆ ಹೇಳು.

ಟುಕ್, ಟುಕ್ : ನೀವ ಹೇಳ್ರಿ.

ಚಿಡ್, ಚಿಡ್ : ಈ ಕೆಟ್ಟ ಹುಡುಗರು ನನ್ನ ಮಾತು ಕೇಳ್ತಾ ಇಲ್ಲ.

ಭಿಕ್ಕು : ಮತ್ತೆ, ಇಂಜನ್ನಿನ ಭಾಗ ಎಲ್ಲೆಲ್ಲಿ ಅವ ಅಂತ ಹೇಳಿರಿ ಅಂದ್ರ ಈ ಬೋರ್ಡ ಅಳಿಸಿ ಹಾಕ್ತೀವಿ.

ಟುಕ್, ಟುಕ್ : ಏನು? ಇಂಜನ್ನಿನ ಭಾಗಗಳು?

ಚುನ್ನು : ಹೂಂ ನಾವು ಅವು ಎಲ್ಲಿ ಅಂವ ಹುಡುಕಿ ಜೋಡಿಸಿದ್ರ ಅದು ನಮ್ಮಗೆ ಅಂತ.

ಚಿಡ್, ಚಿಡ್ : ಆದ್ರೆ ಅದು ನಿಮ್ಮ ಕೈಲೆ ಸಾಧ್ಯ ಇಲ್ಲ !

ಭಿಕ್ಕು : ಈ ಟುಕ್, ಟುಕ್ ಭಯ್ಯಾ ನಮಗೆ ಸಹಾಯ ಮಾಡಿದರ ಯಾಕ ಸಾಧ್ಯ ಇಲ್ಲ?

ಟುಕ್, ಟುಕ್ : ನೀವು ಮಾಡ್ರಿ ಅಂದ್ರ ನಾ ತಯಾರ.

ಹುಡುಗರು : ಜರೂರು, ಜರೂರು, ನಿಮ್ಮ ಸಹಾಯ ನಮಗ ಬೇಕೇಬೇಕು.

ಚಿಡ್, ಚಿಡ್ : (ನಕ್ಕು, ನಕ್ಕು ಆಯಾಸ ಹೊಂದಿ) ನೀವು ಅದನ್ನ ಜೋಡಿಸಲಿಕ್ಕೆ ಸಾಧ್ಯ ಇಲ್ಲ. ಹುಡುಕರಿ, ಹುಡುಕರಿ ನನಗೇನೂ ನಷ್ಟ ಇಲ್ಲ. ಉತ್ತರ ಧೃವದ ಚಳಿಗಾಳಿ ಮಂಜಿನಾಗ, ಸಹರಾ ಮರುಭೂಮಿ, ಬಿಸಿ ಬಿಸಿ ಗಾಳಿ, ಮರಳಿನ ಮ್ಯಾಲೆ, ಆಗ ನೀವು ನನ್ನಂಗ ಮಕ್ಕಳನ್ನ ಕಂಡ್ರೆ ಸಿಟ್ಟಿಗೇಳಲಿಕ್ಕೆ ಶುರು ಮಾಡತೀರಿ..... ಹಾ...... ಓಹೋ...... ಹೂಹೂ...... ಹೇಳ್ರೀ....... ಈಗಲ್ಲಿ ನೀವು ಈ ಪ್ರಯತ್ನ ಮಾಡತೀರಿ.

ಚುನ್ನು : ಹೂಂ, ಬಿಡಂಗಿಲ್ಲ, ಭಯ್ಯಾ ನಿಮ್ಮ ಹತ್ರ ನಾವು ಅಡ್ಡಾಡಲಿಕ್ಕೆ ಮೋಟಾರಗಾಡಿ ಆದನಾ?

ಟುಕ್, ಟುಕ್ : ಇಲ್ಲಪ್ಪ, ಎಲ್ಲದ, ನಾವು ನಡೆದುಕೊಂಡೇ ತಿರುಗಾಡಬೇಕು.

ಚುನ್ನು : ಹಾಗಾದ್ರೆ ನಾನು ಬರಲಿಕ್ಕೆ ಶಕ್ಯವಿಲ್ಲ.

ಭಿಕ್ಕು : ಯಾಕೋ?

ಚುನ್ನು : ಯಾಕಂದ್ರ ನನಗೆ ಹೋಂ ವರ್ಕ್ ಮಾಡೋದು ಅದ.

ಮುನ್ನು : ನನಗ, ಚಳಿಗಾಳಿ ತಡೆಂಗಿಲ್ಲ. ನೆಗಡಿ, ಕೆಮ್ಮು ಆಗ್ತದ. ಮತ್ತ ಟೈಮ್‌ವೇಸ್ಟ್

ಟುಕ್, ಟುಕ್ : ಸರಿ ಹಂಗಾರೆ, ನಾನು ಒಬ್ಬನೇ ಅಡ್ಡಾಡಿ ಎಲ್ಲಾ ಭಾಗಗಳನ್ನು ಹುಡುಕಿ ಒಂದು ಕಡೆ ಇಡತೀನಿ. ಆಗ ಬರ್ರಿ.

ಚಿಡ್, ಚಿಡ್ : ಅಂತಹ ದಿನ ಬರಲಿಕ್ಕೆ ಸಾಧ್ಯ ಇಲ್ಲ. ಹಾಹಾ, ಓಹೋ, ಹೂಹೂ, ಸಾಧ್ಯನೇ ಇಲ್ಲ.

ಭಿಕ್ಕು : ಭಯ್ಯಾ ನಾನು ನಿಮ್ಮ ಜತೇಗೆ ಬರತೀನಿ.

ಚುನ್ನು+ಮುನ್ನು : (ಒಮ್ಮೆಲೆ) ನೀನು.........

ಚಿಡ್, ಚಿಡ್ : ಇಷ್ಟು ಸಣ್ಣ ಹುಡುಗಿ ಹೋಗ್ತಾಳಂತ, ಮೂರ್ಖತನ (ನಗುತ್ತಾನೆ)

ಟುಕ್, ಟುಕ್ : ಈ ಹುಡುಗಿ ಬಹಳ ಹುಷಾರದಾಳ ಮತ್ತ ಆಕಿಗೆ ಇಂಜನ್ನ ಬಗ್ಗೆ ಗೊತ್ತದ.

ಚಿರ್, ಚಿರ್ : ಹೋಗ್ರಿ, ಹೋಗ್ರಿ ಅರಣ್ಯ ತಿರಗಿರಿ, ಅದಕ್ಕಿಂತ ಮುಂದ ಹೋಗ್ಲಿಕ್ಕೆ ಸಾಧ್ಯ ಇಲ್ಲ (ನಗುತ್ತಾ) ನಿನ್ನ ಹೆಸರೇನು?

ಭಿಕ್ಕು : ಭಿಕ್ಕು ವಿಕ್ಕಿ ಮಿಕ್ಕಿ.........

ಟುಕ್, ಟುಕ್ : ನಾವು ಹೋಗಿ ಬರ್ತೀವಿ ಸೇಠ ಸಾಹೇಬ. ರಾಮ್ ರಾಮ್ (ಹೋಗುವರು)

ಚಿರ್, ಚಿರ್ : ರಾಮು ರಾಮು (ನಗುತ್ತಾ) ರಾಮು ರಾಮು ಟುಕ್, ಟುಕ್, ರಾಮು ರಾಮು ನಿಕ್ಕಿ ಮಿಕ್ಕಿ, ಟನ್ನಿ ಟನ್ನಿ, ಟಕ್ಕಿ ಪಿಕ್ಕಿ (ಬೋರ್ಡು ಓದುತ್ತಾ) ಬೇಡ ಅನ್ನುವರು ಬೇಡ. ಅದೇ ಏನಿಲ್ಲರಿ, (ಇಬ್ಬರೂ ನಿಲ್ಲದೇ ಹೋಗುವರು) ಈ ಬೋರ್ಡನ್ನು ಈಗಲೇ ಅಳಿಸಿ ಹಾಕ್ತೀವಿ. ಇಲ್ಲಾಂದ್ರ ನಾನು ಏನೂ ಬರೀಲಿಕ್ಕೆ ಸಾಧ್ಯ ಇಲ್ಲ. ಸುಳ್ಳೇ ನಾಯಾಕ ದುಃಖ ಪಡಲಿ– ಸುಳ್ಳೇ ಈ ಹುಡುಗರು ಗದ್ದಲದಾಗ ಸಿಕ್ಕು ಹಾಕಿಕೊಂಡೆ (ಸಿಟ್ಟಿನಿಂದ) ಇದು ಅನ್ಯಾಯ – ಇದು ಮೋಸ...... ಮಗನೇ ತಾಲಮ್ ತಾಲ್, ನೋಡ್ತಾ ಇರು. ನಾ ಸುಮ್ಮನೆ ಇರಂಗಿಲ್ಲ. ಇದರ ಸೇಡು ತೀರಿಸಿಕೊಂಡೇ ತೀರತೀನಿ.

— 0 —

## ದೃಶ್ಯ — ೩

(ರಂಗದ ಎಡ ಮತ್ತು ಬಲ ಭಾಗದಲ್ಲಿ ಎರಡು ದೊಡ್ಡ ದೊಡ್ಡ ಕಬ್ಬಿಣದ ಅಚ್ಚುಗಳಿದ್ದು, ಮುಂದೆ ಅವೇ ಕಬ್ಬಿಣದ ಗಾಲಿಗಳಾಗಿ ಮಾರ್ಪಡುತ್ತವೆ. ಒಂದು ಕಡೆ ಮುರಿದ ಬೆಂಚು ಇದ್ದು, ಅದು ಮುಂದೆ ಇಂಜನ್ನಿನ ಚಾಸೀಸ್ ಆಗುತ್ತದೆ. ರಂಗದ ಮಧ್ಯೆ ಒಂದು ವಿಚಿತ್ರಾಕಾರದ ಮಿಶಿನ್ ಇದ್ದು ಅದರಿಂದ ಹೊರಟ ದಾರವೊಂದು ಆ ಗಾಲಿಗಳಿಗೆ ಜೋಡಿಸಲಾಗಿದೆ. ಒಬ್ಬ ವ್ಯಕ್ತಿ / ಮಾಸ್ತರಜಿ ಆ ಮಶೀನನ ಹತ್ತಿರ ಏನೋ ಮಾಡುತ್ತ ಹಾಡುತ್ತಿದ್ದಾನೆ)

(ಮಾಸ್ತರ ಹಾಡು)

ಮಾಸ್ತರಣಿ : (ಪ್ರವೇಶಿಸುತ್ತ) ಏನು ಮಾಡಲಿಕ್ಕೆ ಹತ್ತೀರಿ, ಮಾಸ್ತರಜಿ.

ಮಾಸ್ತರ : ನಾನು ಒಂದು ಸಂಶೋಧನಾ ಮಾಡಲಿಕ್ಕೆ ಹತ್ತೀನಿ. ಇದರಿಂದ ನಮ್ಮ ಶಾಲೆಗಳಲ್ಲಿ ಭಾರೀ ಬದಲಾವಣೆ ಬರೋದ ಅದ. ಕೂಡ್ರಿ, ಹೆಂಗದ ನನ್ನ ಸಾಲಿ?

ಮಾಸ್ತರಿಣಿ : ಮಜಾಕ್ ಮಾಡ್ತೀರಿ ಕಾಣಸ್ತದ. ಇದ ನಿಮ್ಮ ಶಾಲೆ? ನೋಡಿದ್ರ ನಗು ಬರ್ತದ.

ಮಾಸ್ತರ : ಹಿಂಗ ನೋಡ್ತಾ ಹೋಗ್ರಿ– ಈ ನಗದ, ಗಿಗದ ಮರೆತ್ತು ಹೋಗ್ತೀರಿ, ನನ್ನ ಈ ಮಶೀನ ಶುರು ಆಯ್ತಂದ್ರ, ಯಾವ ಶಾಲೆಗಳಿಗೂ ಮಾಸ್ತರನ ಅವಶ್ಯಕತೆ ಇರೋದಿಲ್ಲ. ನಾವಿಬ್ಬರೂ ಬೇಕಾರ್ ಆಗ್ತೀವಿ.

ಮಾಸ್ತರಿಣಿ : ಹಂಗಂಗ ಆಗ್ತದ. ಜಗತ್ತಿನಾಗ ಒಬ್ಬರೂ ಮಾಸ್ತರರು ಇಲ್ಲಾಂದ್ರ ಮಕ್ಕಳಿಗೆ ಚಕ್ಕಂದ

ಆಗ್ತದ. ಆವು ಆಮ್ಯಾಲೆ ಯಾರಿಗೂ ಹೆದರೂದೇ ಇಲ್ಲ (ಮಶಿನ್ ನೋಡಿ) ಇವೇನು ಇವು ಟೆಕ್ಸ್ಟ ಬುಕ್ಸ್ ಹಿಂಗ್ಯಾಕ ಮುಚ್ಚಿ ಇಟ್ಟೀರಿ? ಓದಬೇಕಂದ್ರ ಹೇಂಗ? ಏನ್ ವಿಚಿತ್ರ ಸಾಲಿ ನಿಮ್ಮದು. ನಿಮಗ ನಾಚಿಗೆ ಇಲ್ಲ ಕಾಣಸ್ತದ.

ಮಾಸ್ತರ : ಅದಕ್ಯಾಕ ನಾಚಿಗೆ. ಈ ಮಶಿನ್ನಿನ ಚಮತ್ಕಾರ ನೋಡು. ಪುಸ್ತಕದಾಗ ಇರೋದೆಲ್ಲ ಕಬ್ಬಿನಹಾಂಗ ಹಿಂಡಿ ಹಿಪ್ಪಿ ಆಗಿ ಅದರ ರಸ ಮಶೀನಿನಾಗ ಬರತದ. ನಮ್ಮಲ್ಲಿರೋ ಯಾವ ಹುಡುಗನ್ನಾದರೂ ಇದರ ಕೆಳಗ ಕೂಡಿಸಿದ್ರ ಅವ ದೊಡ್ಡ ಗಣಿತಶಾಸ್ತ್ರಜ್ಞ ಆಗ್ತನ ರಾಮಾನುಜರಂಗ. ಇನ್ನೊಂದರ ಕೆಳಗ ಕೂಡಿಸು ಅವ ಥೇಟ್ ಸಿ.ವಿ. ರಾಮನ್ ಆಗ್ತಾನ.

ಮಾಸ್ತರಣಿ : ಸುಳ್ಳು, ಎಲ್ಲಾ ಸುಳ್ಳು.

ಮಾಸ್ತರ : ಹಂಗಾರೆ, ನಿಮ್ಮ ಸಾಲಿ ಒಬ್ಬ ಹುಡುಗನನ್ನ ಕರೆದು ತಂದು ಇದರ ಕೆಳಗ ಕೂಡಿಸಿ ನೋಡು.

ಮಾಸ್ತರಿಣಿ : ಹುಡುಗ ದಡ್ಡಾರ ಇರ್‍ಲಿ, ಶಾಣ್ಯಾರ ಇರ್‍ಲಿ?

ಮಾಸ್ತರ : ಏನೇನು ಫರಕ್ ಆಗಂಗಿಲ್ಲ. ಧಡ್ಡ ಇದ್ರೂ ನಡೀತದ. (ಮಾಸ್ತರಿಣಿ ಹೋಗುತ್ತಾಳೆ. ಭಯ್ಯಾ ಮತ್ತು ಭಿಕ್ಕು ಬರುತ್ತಾರೆ.)

ಟುಕ್, ಟುಕ್ : ಅಲ್ಲಿ ನೋಡು, ಏನು ಕಾಣಿಸಲಿಕ್ಕೆ ಹತ್ತದ.

ಭಿಕ್ಕು : ಅದಾ, ಎರಡು ಕಿವ್ಯಾಗ ಇಡೋ ಯಂತ್ರ.

ಮಾಸ್ತರ : ಏ, ನಿಮಗ ಅದೆಲ್ಲ ತಿಳೀಲಿಕ್ಕೆ ಸಾಧ್ಯ ಇಲ್ಲ. ನಿಮ್ಮ ಯೋಚನಿ ಹೂರಗ ಅದ. ಕೂದ್ರಿ. ಏನ ಬೇಕಾಗಿತ್ತು?

ಟುಕ್, ಟುಕ್ : ಯೋಚನಿ ಮಾಡಲಿಕ್ಕೆ ಸಾಧ್ಯ ಇಲ್ಲ ಅಂತೀರಿ? ನೀವು ಪುಸ್ತಕ ಬ್ಯಾಂಡ್ ಮಾಡೋರೇನು? (ಒಂದು ಪುಸ್ತಕ ತೆಗೆಯಲು ಪ್ರಯತ್ನಿಸುತ್ತ) ಮಶಿನ್ನಿನಾಗ ಸಿಕ್ಕಹಾಕಿರಲ್ಲ? ನಾವೇನು ಕತ್ತೆಗಳೇನು?

ಭಿಕ್ಕು : (ಜೀವ ವಿಜ್ಞಾನ ಚಕ್ರದ ಕೆಳಗೆ ಕುಳಿತು) ಕತ್ತೆ, ಕತ್ತೆ ನಾಲ್ಕು ಕಾಲಿನ ಪ್ರಾಣಿ. ಕುದುರೆ ಜಾತಿಗೆ ಸೇರಿದ್ದು, ಕಿವಿ ಉದ್ದ, ಬಾಲದಲ್ಲಿ ಕೂದಲು ಚವರಿ ಹಾಗೆ, ಕತ್ತೆಯನ್ನು ಇಂಗ್ಲಿಷಿನಲ್ಲಿ ಡಾಂಕಿ ಎನ್ನುತ್ತಾರೆ.

ಟುಕ್, ಟುಕ್ : (ಭಿಕ್ಕುವನ್ನು ಎತ್ತುತ್ತ) ಏ, ಭಿಕ್ಕಿ, ಏನೇನೋ ಮಾತಾಡ್ತಿಯಲ್ಲಮ್ಮ.

ಭಿಕ್ಕು : ನಾನ? ಏನೂ ಇಲ್ಲ (ಇನ್ನೊಂದು ಚಕ್ರದ ಕೆಳಗೆ ಹೋಗಿ) ತಾ, ಎರಡು ರೂಪಾಯಿ ತಾ. ಎರಡೆರಡು ನಾಲ್ಕು, ನಾಲ್ಕೆರಡು ಎಂಟು, ಐದು ಎರಡು ಹತ್ತು.

ಟುಕ್, ಟುಕ್ : ಗೊತ್ತಾಯಿತಮ್ಮ, ನಿನಗೆ ಗಣಿತ ಬರುತ್ತದೆ ಎಂದು ತಿಳಿಯಿತು.

ಭಿಕ್ಕು : ಅದು ಹೇಗೆ ತಿಳಿಯಿತು ಭಯ್ಯಾ?

ಟುಕ್, ಟುಕ್ : ಸ್ವಲ್ಪ ಹೊತ್ತಿನ ಮೊದಲು ಮಗ್ಗಿಪಾಠ ಹೇಳ್ತಾ ಇದ್ದಿ.

ಭಿಕ್ಕು : ನಾನೇ? ಸಾಧ್ಯ ಇಲ್ಲ.

ಮಾಸ್ತರ : ಯುರೇಕಾ, ಯುರೇಕಾ, ರೀ ಸ್ವಾಮಿ, ಆ ಹುಡುಗಿ ನಿಜ ಹೇಳುತ್ತಾ ಇದ್ದಾಳೆ. ಲೆಕ್ಕ ಮಾಡಿದ್ದು ಮಶೀನು. ಇಕಿ ಅದನ್ನ ಹೇಳಿದಳು.

ಟುಕ್, ಟುಕ್ ಮಶೀನು?

ಮಾಸ್ತರ : ಹೂ ಮತ್ತೆ, ಇದನ್ನ ತಯಾರು ಮಾಡಿದ್ದು ನಾನು.

(ಮಾಸ್ತರಿಣಿ ಕೆಲ ವಿದ್ಯಾರ್ಥಿಗಳೊಂದಿಗೆ ಬರುತ್ತಾಳೆ)

ಮಾಸ್ತರಿಣಿ : ಇಕಾ ಹುಡುಗರು, ಅರೆ ಅಗ್ಗೆ ಈ ವಿದ್ಯಾರ್ಥಿನಿ ಎಲ್ಲಿಂದ ಬಂದಳು. (ಭಯ್ಯಾನ ಕಡೆ ತಿರುಗಿ) ಮತ್ತ ನೀವು ಯಾರು? ನೀವೂ ಮಾಸ್ತರರು ಏನು?

ಟುಕ್, ಟುಕ್ ಇಲ್ಲಾ ಮೇಡಂ, ನಾನು ಇಂಜನ್ ಡ್ರೈವರ್.

ವಿದ್ಯಾರ್ಥಿ : ಆಹಾ! ಖರೇ, ಖರೇ ಇಂಜನ್ ಡ್ರೈವರ್ ಬಂದಾನ.

ಮಾಸ್ತರಿಣಿ : ಏ ಕತ್ತೆ, ಮೊದಲು ಸ್ವಲ್ಪ ಕಲಿ. ಆ ಮ್ಯಾಲೆ ನೀನು ಬೇಕಾದರೆ ಡ್ರೈವರ್ ಆಗಿಯಂತ (ಚಕ್ರದ ಕಡೆ ತೋರಿಸುತ್ತ) ಅಲ್ಲಿ ಹೋಗಿ ಕೂಡು ಈಗ ಹೇಳು. ೮ X ೪ ಎಷ್ಟು?

ವಿದ್ಯಾರ್ಥಿ : (ಚಕ್ರದ ಕೆಳಗಿನಿಂದ) ಚಾರ್ವಾಕ ಎನ್ನುವುದು ಒಂದು ಹಕ್ಕಿಯ ಹೆಸರು. ಅದಕ್ಕೆ ಎರಡು ಕಾಲುಗಳು, ಎರಡು ರೆಕ್ಕೆಗಳು, ಒಂದು ಕೊಕ್ಕು. ಕಾಲುಗಳು ಉದ್ದ, ಕೊಕ್ಕು ಬಹಳ ಚೂಪಾಗಿ ಇರುತ್ತದೆ.

ಮಾಸ್ತರ : ಏ. ಏ. ಅದು ಜೀವಶಾಸ್ತ್ರದ ಚಕ್ರ.

ಮಾಸ್ತರಿಣಿ : ಅಯ್ಯೋ, ಅಲ್ಲಿಂದ ಬಂದು ಇಲ್ಲಿ ಕೂಡು ಮತ್ತೆ ಹೇಳು ೭ X ೫ ಎಷ್ಟು? ( ಈ ಮಧ್ಯೆ ಭಯ್ಯಾ ಚಕ್ರದ ದಾರಗಳನ್ನು ಅದಲು ಬದಲು ಮಾಡಿರುತ್ತಾನೆ.)

ಬಾಲವಿರುವ ಪ್ರಾಣಿಗಳಲ್ಲಿ ಎರಡು ವಿಧ. ಕೊಂಬು ಇರುವ ಮತ್ತು ಇಲ್ಲದ ಆಕಳು, ಎಮ್ಮೆ ಇತ್ಯಾದಿಗಳು ಮೊದಲನೆಯ ಪ್ರಕಾರ. ನಾಯಿ, ಬೆಕ್ಕು, ಹುಲಿ, ಕೋತಿಗಳು ಎರಡನೆಯ ಜಾತಿಗೆ ಸೇರುತ್ತವೆ.

ಮಾಸ್ತರ : ಸಾಕು ನಿಲ್ಲಿಸು, ಇದು ಸಹ ಜೀವಶಾಸ್ತ್ರದ ಚಕ್ರ ಅದ. (ಭಿಕ್ಕಿಗೆ) ನೀನು ಮತ್ತು ಇವ ಸ್ಥಳ ಬದಲಾಯಿಸಿ.

ಭಿಕ್ಕು : ಕಿರಿಕಿರಿ ಬ್ಯಾಡರಿ. (ಸ್ಥಳ ಬದಲಾಯಿಸುತ್ತಾಳೆ)

ಮಾಸ್ತರ : ಹಾಂ ಈಗ ಪುನಃ ಶುರುಮಾಡ್ರಿ.

ಮಾಸ್ತರಿಣಿ : ಹಾಗಾದರೆ ಈಗ ಹೇಳಿ ಯಾವ ಯಾವ ಪ್ರಾಣಿಗಳನ್ನು ಚತುಷ್ಪಾದಗಳೆಂದು ಕರೆಯುತ್ತಾರೆ.

ಚತುಷ್ಪಾದ? ಎಂದರೆ ನಾಲ್ಕು. ನಾಲ್ಕು ನಾಲ್ಕಲೆ ಹದಿನಾರು, ಹದಿನಾರು ಹದಿನಾರಲೇ ೨೫೬, ೨೫೬ X ೨೫೬ = ೬೫,೫೩೬, ೬೫,೫೩೬ X ೬೫,..................

(ನಿಲ್ಲುತ್ತಾನೆ)

ಮಾಸ್ತರ : ಇದು ಯಾಕೋ ಸರಿ ಹೋಗ್ತಾ ಇಲ್ಲ. ಮತ್ತೆ ಮೊದಲಿನ ಸ್ಥಳಕ್ಕೆ ಹೋಗಿ. (ಬದಲಾಯಿಸುವರು) ಯಾಕೆ ಹೀಗೆ? ಸ್ವಲ್ಪ ಹೊತ್ತಿನ ಮೊದಲು ಇದ್ದ ವ್ಯವಸ್ಥೆ

ಹಾಳಾಗಲು ಏನು ಕಾರಣ. (ಮಶೀನ ಹತ್ತಿರ ಹೋಗುತ್ತಾನೆ. ಭಯ್ಯಾ ಅಮಾಯಕನಂತೆ ನಿಂತಿದ್ದಾನೆ) ಅಯ್ಯೋ ನೋಡಿಲ್ಲಿ. ತಂತಿಗಳು ಸ್ಥಾನಪಲ್ಲಟ ಆಗ್ಯಾವ. ಈಗ ನಾನು ಕೇಳತೀನಿ ೬ X ೭ ಎಷ್ಟು?

ಭಿಕ್ಕು : ಮ್ಯಾಂವ್, ಮ್ಯಾಂವ್, ಟ್ರೊಂಯಂ, ಟ್ರೊಂಯಂ,

ಮಾಸ್ತರಿಣಿ : ಏ, ನಿಮ್ಮ ಮಶೀನು ದಂಡ ಅದ ಕಾಣಸ್ತದ. ಇದರಿಂದ ಒಂದು ಪೈಸಾದ ಉಪಯೋಗ ಇಲ್ಲ.

ವಿದ್ಯಾರ್ಥಿ : ಪೈಸಾ! ನೂರು ಪೈಸೆ ಅಂದರೆ ಒಂದು ರೂಪಾಯಿ. ೫೦ ಪೈಸೆ ಎಂದರೆ ಅರ್ಧ ರೂಪಾಯಿ, ೨೫ ಪೈಸೆ ಅಂದರೆ ನಾಲ್ಕು ಆಣೆ, ೧೦ ಪೈಸೆ ಮಾತ್ರ ೧೦ ಪೈಸೆಯಾಗಿರುತ್ತದೆ.

ಮಾಸ್ತರ : ಶಭಾಷ್! ಈಗ ಹೇಳು ೨೦ X ೨೦ ಎಷ್ಟು?

ವಿದ್ಯಾರ್ಥಿ : ಇಪ್ಪತ್ತು, ಇಪ್ಪ – ಪತ್ತು .........ತ್ತು, ಥೂ, ಟೀ, ಟಿಸ್, ಪಿಸ್.

ಮಾಸ್ತರಿಣಿ : ಕ್ಲಾಸ್ ಡಿಸ್‌ಮಿಸ್– ಸುಡುಗಾಡು ಮಶೀನು (ವಿದ್ಯಾರ್ಥಿಯನ್ನು ಎಳೆದುಕೊಂಡು) ಇದಕ್ಕಿಂತ ಚಂದ ನಾನೇ ಕಲಸ್ತೀನಿ. ಇದರಿಂದ ಬಂದದ್ದು ಮರೆತು ಹೋಗ್ತದ ನಡಿ (ನಿರ್ಗಮನ).

ಮಾಸ್ತರ : ಈ ಮಶಿನ್ನಿನಿಂದ, ಧಡ್ಡ ಹುಡುಗರು, ಹುಷಾರ್ ಆಗ್ತಾರೆ ಅಂತಾ ಮಾಡಿದ್ದೆ.

ಟುಕ್, ಟುಕ್ : ಈ ಮಶೀನು ಧಡ್ಡ ಹುಡುಗರಿಗೆ ಅಲ್ಲ, ಧಡ್ಡ ಮಾಸ್ತರಿಗೆ ಇರಬೇಕು.

ಮಾಸ್ತರ : ಯಾರು? ನೀ ಇಲ್ಲೇ ಇದ್ದಿ, ನಿನ್ನಷ್ಟಕ್ಕೆ ನೀನು ಏನೆಂದು ಕೊಂಡಿರುವಿ? ಸೊಟ್ಟ ಇಂಜನ್ ಡ್ರೈವರ್ ಮಾಸ್ತರಗೇ ಕಲಿಸಲಿಕ್ಕೆ ಬರ್‍ತಿ.

ಭಿಕ್ಕು : ಒಳ್ಳೇ ಇಂಜನ್ ಡ್ರೈವರ್, ಧಡ್ಡ ಮಾಸ್ತರಗಿಂತ ಸಾವಿರ ಪಾಲು ಮೇಲು.

ಮಾಸ್ತರ : ಅನ್ಯಾಯ ಬಹಳ ಅನ್ಯಾಯ ಇದು..... ನಾನೊಬ್ಬನೇ ನೀವಿಬ್ಬರು. ಬಹಳ ಮಾತಾಡ್ತೀರಿ..... ನಿಮಗ ನಾಚಿಕೆ ಇಲ್ಲ. ಊಂ.... ಊಂ (ಕಣ್ಣು ಒರೆಸುವನು).

ಟುಕ್, ಟುಕ್ : ಮಾಸ್ತರರೇ, ಸಂಶೋಧನಾ ಅಂದ್ರೆ, ನಗದು, ಹಾಡದು ಇಂಥ ಮಶಿನ್ನು ಇರಬೇಕು. ಜಗತ್ತಿನ್ಯಾಗ ಸಾವಿರಾರು ಇಂತಹ ವಿಷಯ ಅವ. ಅವೆಲ್ಲ ಬಿಟ್ಟು ಸಾಲಿ ಕಲಿಸೋ ಮಶಿನ್ನ ತಯಾರ ಮಾಡಿರಿ.

ಮಾಸ್ತರ : ನಾನು ಒಬ್ಬ ಮಾಸ್ತರ. ನನಗ ಈ ಓದು, ಬರಹ ಅಂದ್ರೆ ಬಹಳ ಪ್ರೀತಿ. ಆದರ್ಶ ಮಾಸ್ತರ ಆಗೋದು ನನ್ನ ಗುರಿ ಇಷ್ಟೆಲ್ಲ ಕಷ್ಟಪಟ್ಟರೂ ಪ್ರಯೋಜನ ಆಗ್ಲಿಲ್ಲ.

ಭಿಕ್ಕು : ಇದರಿಂದ ಯಾವ ಪ್ರಯೋಜನ ಆಗ್ಲಿಕ್ಕೆ ಸಾಧ್ಯ?

ಮಾಸ್ತರ : ಯಾಕ ಸಾಧ್ಯ ಇಲ್ಲ. ಮಶೀನಿನ ಕೆಲಸಾನೇ ಅದು. ಬಟ್ಟೆ ಒಗೆಯೋ ಮಶೀನ್ ಬಟ್ಟೆ ಒಗೀತದ, ಹೊಲಿಯೋ ಮಶೀನ್ ಹೊಲಿತದ..........

ಟುಕ್, ಟುಕ್ : ಮತ್ತು ಓದಿಸೋ ಮಶೀನು......

ಮಾಸ್ತರ : ಹುಡುಗರು, ಪ್ರಶ್ನೆಗಳಿಗೆ ಉತ್ತರ ಬರೀಲಿಕ್ಕೆ ಸಹಾಯ ಆಗ್ತದ.

ಝುಕ್, ಝುಕ್ : ಒಮ್ಮೆ ಉತ್ತರ ಕೊಟ್ಟ ಮ್ಯಾಲೆ ಅದು ವಿದ್ಯಾರ್ಥಿಗಳ ತಲಿಯಿಂದ ಹಾರಿಹೋಗ್ತದ. ಯಾಕೆ ಎಂದರೆ, ಉತ್ತರ ಹುಡುಗರು ಸ್ವಂತ ಬುದ್ಧಿ ಉಪಯೋಗ ಮಾಡಿರೋದೆ ಇಲ್ಲ. ಮಶೀನ್ ಆ ಕೆಲಸ ಮಾಡಿರ್ತದ.

ಮಾಸ್ತರ : ಖರೆ, ಇದರಿಂದ ನಾನು ಪ್ರತಿ ವಿಷಯ, ಪ್ರತಿಸಲ ಹುಡುಗರಿಗೆ ಹೇಳ್ತಾ ಇರಬೇಕು ಆಗ್ತದ.

ಝುಕ್, ಝುಕ್ : ಹೌದು ಮತ್ತೆ. ಇದರ ಬದಲು ಪ್ರಶ್ನೆಗಳನ್ನೇ ಕೇಳುವಂತಹ ಮಶೀನು ತಯಾರು ಮಾಡ್ರಿ.

ಭಿಕ್ಕು : ಪ್ರಶ್ನೆ ಕೇಳೋ ಮಶೀನ?

ಮಾಸ್ತರ : ಪ್ರಶ್ನೆಯಂತ್ರ?

ಝುಕ್, ಝುಕ್ : ಹೂಂ ಅದರಿಂದ ಜನ ಒಂದಿಷ್ಟು ಏನಾರ ಕಲಿಲಿಕ್ಕೆ ಸಾಧ್ಯ. ಯಂತ್ರ ಪ್ರಶ್ನೆ ಕೇಳಬೇಕು. ನಾವು ಹೇಳಿದ ಉತ್ತರ ಸರಿ ಇದ್ದರೆ.

ಭಿಕ್ಕು : ಒಂದು ಪೇಡಾ ಹೊರಗೆ ಬರಬೇಕು.

ಮಾಸ್ತರ : ತಪ್ಪು ಹೇಳಿದಾಗ ಕಪಾಳಕ್ಕೆ ಒಂದೇಟು ಬಿಡಬೇಕು!

ಝುಕ್, ಝುಕ್ : ಥೂ ಪೇಡಾ ಬೇಡಾ, ಏಟೂ ಬೇಡಾ, ಉತ್ತರ ಸರಿ ಇದ್ದರೆ, ಮಶೀನು ಡಣ್, ಡಣ್ ಅಂತ ಗಂಟೆ ಬಾರಿಸಿದರೆ ಸಾಕು.

ಭಿಕ್ಕು : ಉತ್ತರ ಸರಿ ಇಲ್ಲದಿದ್ದರೆ, ಮಶೀನ್ ಗುರ್ ಗುರ್ ಅಂತ ಗರ್ಜಿಸಿದರೆ ಹೇಗೆ?

ಝುಕ್, ಝುಕ್ : ಕರೆಕ್ಟ್, ಮಾಸ್ತರ್ ನೀವೇನಂತೀರಿ?

ಮಾಸ್ತರ : ಟಣ್, ಟಣ್...... ಗುರ್, ಗುರ್....... ಸ್ವಲ್ಪ ತಡೀರಿ. ನೀವು ಹೇಳೋ ಮಾತಿನಲ್ಲಿ ಅರ್ಥ ಅದ. ಆಗ ಈ ಟೆಕ್ಸ್ಟಬುಕ್ಸ್‌ಗಳೆಲ್ಲ ಬೇಕಾರ ಅನಸ್ತವ, ಬೇಕಾರ ಅಷ್ಟೇ ಅಲ್ಲ, ಕಚಡಾ ಅನಸ್ತಾವ.

ಝುಕ್, ಝುಕ್ : ಬೇಕಾರ ಏನಿಲ್ಲ. ಅದರಿಂದ ಇನ್ನೂ ಹೆಚ್ಚಿನ ಫಾಯಿದೆ ಅದ.

ಮಾಸ್ತರ : (ಪುಸ್ತಕ ಮುಚ್ಚಿ) ವಾಹ! ನಿಮಗ ಬಹಳ ಥ್ಯಾಂಕ್ಸ್. ಪ್ರಶ್ನೆಯಂತ್ರ ಒಂದು ಮತ್ತು ಒಂದು ಎಷ್ಟು? ....... ಮೂರು ....... ಟಣ್, ಟಣ್........ ವಾಹ!

ಭಿಕ್ಕು : ಅಲ್ಲ. ಗುರ್, ಗುರ್ (ಹೋಗುವನು) ಭಯ್ಯಾ ನೀವು ಈ ಚಕ್ರವನ್ನು ಒಂದೇ ರೀತಿ ನೋಡ್ತಾ ಇದ್ದೀರಿ.

ಝುಕ್, ಝುಕ್ : ನೀನೂ ನೋಡು...... ನೋಡು...... ನೋಡಿದ್ಯಾ..... (ಮೊದಲನೆಯ ಗಾಲಿ ಇಳಿಸುತ್ತಾನೆ)

ಭಿಕ್ಕು : ಅರೆ, ಇವು ಗಾಲಿಗಳು....... ಇಂಜನ್ ಗಾಲಿಗಳು....... ನಮ್ಮ ಇಂಜನ್ ಗಾಲಿಗಳು...... ವಾಹ, ವಾಹ ! ನಮ್ಮ ಇಂಜನ್ನಿನ ಗಾಲಿ ಸಿಕ್ಕೇಬಿಟ್ಟವು. (ಎರಡನೆಯ ಗಾಲಿ ಇಳಿಸುತ್ತಾರೆ).

ಝುಕ್, ಝುಕ್ : ಓ ನನ್ನ ಪ್ರೀತಿಯ ಗಾಲಿಗಳೇ! ಆಂದ್ರೆ ನಮ್ಮ ಶೇಠ ಚೆಡ್, ಚೆಡ್‌ದಾಸ, ಈ

ಹಾದಿಯಲ್ಲಿ ಹೋಗಿರಬೇಕು. ನಾವು ಇದೇ ಮಾರ್ಗದಲ್ಲಿ ಹೋಗಬೇಕು. ಅಂದರೆ ಇನ್ನುಳಿದ ಭಾಗಗಳು ಸಿಗುತ್ತವೆ. (ಖುಷಿಯಿಂದ ಬೆಂಚ್ ಮೇಲೆ ಕೂಡುತ್ತಾನೆ) ಅರೆ ಇದು ಕಬ್ಬಿಣದ ಬೆಂಚು.

ಭಿಕ್ಕು : ಭಯ್ಯಾ ಇದೂನೂ ಆದರದು ಛನಾರ ಇದ್ದೀತು.

ಟುಕ್, ಟುಕ್ ಆದರದು ಅಂದ್ರ?

ಭಿಕ್ಕು : ಅದೇ ಇಂಜನ್ನಿನದು.

ಟುಕ್, ಟುಕ್ ಇಂಜನ್................

ಭಿಕ್ಕು : ಇಂಜನ್ನು. ನಮ್ಮ ರೈಲಿನ ಇಂಜನ್.

ಟುಕ್, ಟುಕ್ ಹೌದು, ಇದು ಅದೇ, ಇದು ಅದೇ, ಇದರ ಮ್ಯಾಲೆ, ಈ ಗಾಲಿಗಳನ್ನು ಕೂಡಸ್ತಾರ. ಬಾ, ಬಾ, ನಿನಗೆ ತೋರಸ್ತೀನಿ. ಹೆಂಗ ಜೋಡಿಸಬೇಕು ಎಂದು. ಅಂದಂಗ ಇಲ್ಲಿರೋ ಹುಡುಗರನ್ನು ಕರೆದು ಅವರ ಸಹಾಯ ಪಡೆಯೋಣ.

ಭಿಕ್ಕು : (ಪ್ರೇಕ್ಷಕರಿಗೆ) ಸ್ನೇಹಿತರೇ, ನೀವು ನಮಗೆ ಸಹಾಯ ಮಾಡುವಿರಾ?

ಟುಕ್, ಟುಕ್ ಹಾಂ, ಇಲ್ಲಿ, ಇನ್ನೂ ಸ್ವಲ್ಪ ಮುಂದೆ ಜೋಡಿಸು (ಸಂಗೀತ ಪ್ರಾರಂಭ) ಅದನ್ನ ಇಲ್ಲಿ ತಾ (ಹೀಗೆ ಗಾಲಿಗಳನ್ನು ಅಚ್ಚಿಗೆ ಜೋಡಿಸುವರು).

ಭಿಕ್ಕು : ಆಹಾ ! ಹೆಚ್ಚು ಕಡಿಮೆ, ಇಂಜನ್ನಿನ ಹಾಗೆ ಕಾಣಿಸ್ತಾ ಇದೆ.

ಟುಕ್, ಟುಕ್ ಇನ್ನೂ ಇದು ಸ್ಟಾರ್ಟ್ ಆದ್ರೆ ಬಹಳ ಮಜಾ ಬರ್ತದ. (ಇಬ್ಬರು ಅದರ ಮೇಲೆ ಹತ್ತಿ ಕುಳಿತು ಹಾಡುತ್ತಾರೆ..... ಕತ್ತಲು..... ಹಿನ್ನೆಲೆಯಲ್ಲಿ ರೈಲುಗಾಡಿ ಹಾಡು)

## ದೃಷ್ಯ — ೪

– ಹಾಡು –

(ಕತ್ತಲಲ್ಲಿಯೇ ಕೂಗಾಟ. ಕಿರಿಚಾಟ, ಅರೆ ಸತ್ತೆ, ಅನ್ಯಾಯ, ಬಹಳ ಅನ್ಯಾಯ....... ರಂಗದ ಮೇಲೆ ಕುಳಿತಿರುವ ಮೋಟುಮಲ್‌ನಿಗೆ ಭಯ್ಯಾ, ಭಿಕ್ಕು ಬರುತ್ತಿರುವಾಗ, ಚಕ್ರ ಢಿಕ್ಕಿ ಹೊಡೆದಿದೆ).

ಮೋಟುಮಲ್ (ಬೆನ್ನು, ಮುಖ ಉಜ್ಜಿಕೊಳ್ಳುತ್ತ) ಏಯ್? ಯಾರು ಅದು? ಕುರುಡರ ಹೆಂಗ? ಕಾಣಿಸಲಿಲ್ಲವೇನು? ವ್ಯರ್ಥ ಸತ್ತು ಹೋಗುತ್ತಿದ್ದೆ. ಕಿವೀನು ಕೇಳಸಂಗಿಲ್ಲ, ಹಿಂಗ್ಯಾಕ ನಿಂತೀರಿ.

ಟುಕ್, ಟುಕ್ : ನಾವು ಬರ್ತಾ ಇರೋದು ನೋಡಿ ನೀವು ಬದಿಗೆ ಸರಿದು ಹಾದಿ ಬಿಡಬಹುದು ಎಂದುಕೊಂಡಿದ್ದೆ.

ಮೋಟುಮಲ್ ಏನು? ನನ್ನ ಇಲ್ಲಿಂದ ಸರಿ ಅಂದಿ? ನನ್ನ ಏನಂತ ತಿಳಿದುಕೊಂಡಿರುವಿ. ನಾ ಅಲುಗಾಡುವುದು ಈ ಒಂದೇ ರೀತಿ ನೋಡು (ತೆವಳುತ್ತಾ ಮಧ್ಯ ಭಾಗಕ್ಕೆ ಬಂದು)

ಇಷ್ಟು ತ್ರಾಸ ಇದು.

ಭಿಕ್ಕು : ಇವ ಬಹಳ ಸೋಮಾರಿ ಹಾಗ ಕಾಣಸ್ತಾನ.

ಟುಕ್, ಟುಕ್ : ಮತ್ತೆ, ಇಷ್ಟು ದಪ್ಪಗಿರೋ ವ್ಯಕ್ತಿಯನ್ನ ಸಹ ಎಲ್ಲಿಯೂ ನೋಡಿಲ್ಲ. ಅಂದಂಗ ನಿಮಗ ಏಳಲಿಕ್ಕೆ ಸಾಧ್ಯ ಅದ ಏನು?

ಮೋಟುಮಲ್ ಏಳತೀನಿ ಆದರೆ ಮತ್ತೆ ತಕ್ಷಣ ಕೂಡಬೇಕು. (ಜೋರಿನಿಂದ ಏಳಲು ಹೋಗಿ) ಏ ಸ್ವಲ್ಪ ನನ್ನ ಕೈಹಿಡಿ. (ಇಬ್ಬರು ಹುಡುಗರು, ಹೋಟೆಲ್ ಮಾಣಿಗಳ ಉಡುಪಿನಲ್ಲಿ ಒಂದು ಕೈಗಾಡಿಯನ್ನು ತಳ್ಳುತ್ತ ಬರುವರು. ಗಾಡಿ ಬಂದ ಕೂಡಲೇ ಮೋಟುಮಲ್ ಚಟಕ್ಕನೆ ಹಾರಿ ಗಾಡಿ ಹತ್ತಿ ಕೂಡವನು. ಹುಡುಗರು ಉಸಿರು ಬಿಡುತ್ತ ಹೋಗುತ್ತಾರೆ) ಅಯ್ಯಯ್ಯಪ್ಪ ಉಸ್, ಉಸ್.

ಭಿಕ್ಕು : ಈ ಇಬ್ಬರು ಯಾರು?

ಮೋಟುಮಲ್ ನನ್ನ ಮಕ್ಕಳು ಪೇಡಾ ಮತ್ತು ರಸಗುಲ್ಲಾ (ಒಬ್ಬ ಹೆಂಗಸು ಬರುವಳು) ಮತ್ತ ಇಕಿ, ಜಿಲೇಬಿ ನನ್ನ ಹೆಂಡತಿ.

ಜಿಲೇಬಿ : ನಿಮಗ ಏನಾರ ಬೇಕೇನ್ರಿ, ಮೋಟಯ್ಯನೋರೆ.

ಮೋಟುಮಲ್ ಏ, ಏ, ಯಾಕ ಹೀಂಗ ಅಸಹ್ಯ ಮಾತಾಡ್ತಿ. ನನ್ನ ಮಾರಿ ನೋಡು ನಿನಗ ಕಾಣಿಸ್ತದ. ಹಸಿವಿನಿಂದ ಸಾಯಲಿಕ್ಕೆ ಹತ್ತೀನಿ.

ಜಿಲೇಬಿ : ಅಯ್ಯೋ ಪಾಪ..... ತಡೀರಿ..... ಏನಾದ್ರು ತರತೀನಿ (ಹೋಗುವಳು)

ಟುಕ್, ಟುಕ್ : ಆಹಾ! ಏನು ಸಂಸಾರ ಇದು (ಪೇಡಾ ಮತ್ತು ರಸಗುಲ್ಲ, ಒಂದೊಂದು ಲಡ್ಡು ಹಿಡಿದು ಬರುತ್ತಾರೆ)

ಇಬ್ಬರೂ : ಪೂಜ್ಯ ತಂದೆಯವರೇ, ಇಕೋ ತೆಗೆದುಕೊಳ್ಳಿ, ಸಿಹಿ ಸಿಹಿ ಲಡ್ಡು.

ಮೋಟುಮಲ್ ಕೊಡಿಲ್ಲಿ (ಹುಡುಗರು ಹತ್ತಿರ ಬಂದು ಕೊಡುತ್ತಾರೆ. ಆಪನು ತಿಂದು ಮುಖ ಕಹಿ ಮಾಡುತ್ತಾನೆ, ಹುಡುಗರು ಓಡುತ್ತಾರೆ) ನಿಂದ್ರ್ರಿ ಅಲ್ಲೇ ನಿಂದ್ರ್ರಿ (ಹುಡುಗರು ಗಾಬರಿಯಾಗಿ ನಿಲ್ಲುತ್ತಾರೆ) ಇದೇನಿದು ಲಡ್ಡು? ನೀವು ನನಗ ವಿಷ ಕೊಡಬೇಕೆಂದು ಮಾಡಿರೇನು? ನೀವಿಬ್ಬರೂ ಕೋಳಿ ಆಗ್ರಿ (ಹುಡುಗರು ಕೋಳಿಯ ನಟನೆ ಮಾಡುತ್ತಾರೆ) ಮೋಟುಮಲ್ ಲಡ್ಡಿನ ಒಂದೊಂದು ಕಾಳು ಹಾಕುತ್ತಾನೆ. ಅವು ಅವರ ಮುಖಕ್ಕೆ ರಾಚುತ್ತವೆ. ಅವರು ಚೀರುತ್ತಾರೆ) ತೊಗೊಂಡು ಹಾಳಾಗಿ ಹೋಗ್ರಿ. ಇಂಥಾ ಸುಡುಗಾಡು ತಿಂಡಿ ನಾ ತಿನ್ನಂಗಿಲ್ಲ (ಹುಡುಗರು ಹೋಗುತ್ತಾರೆ) ಅರೇ ಓ ಜಿಲೇಬಿ.

ಜಿಲೇಬಿ : (ಓಡುತ್ತ ಬಂದು) ಮತ್ತೇನಾತ್ರಿ?

ಮೋಟಮಲ್ ಈ ಬೂಂದಿ ಲಾಡಿನಲ್ಲಿ ಏನು ಸುಡುಗಾಡು ಕಲಿಸೀರಿ.

ಜಿಲೇಬಿ : ಏನ ಕಲಸಲಿಕ್ಕೆ ಸಾಧ್ಯ? ಈಗೀಗ ಸಕ್ರೀನೇ ರೇಶನ್ ಅಂಗಡ್ಯಾಗ ಸಹಿತ ಸಿಗವಲ್ಲದ್ದು. ಸ್ವಲ್ಪ ಬೆಲ್ಲ ಕಲಿಸೀನಿ.

ಮೋಟುಮಲ್ ನನಗ, ಹೇಳದ ಕೇಳದ, ಬೆಲ್ಲದ ಪಾಕ ಯಾಕ ಮಾಡಿದಿ? (ಆಕೆಯನ್ನು ಹೊಡೆಯಲು

ಪ್ರಯತ್ನಿಸುತ್ತಾನೆ. ಕಟ್ಟಿಗೆಯ ಸೌಟು ಎತ್ತಿ ಆಕೆಯತ್ತ ಬೀಸುತ್ತಾನೆ. ಅದ ಆಕೆಗೆ ತಾಕುವದಿಲ್ಲ) ನಾನು, ನಿನಗ ಹೊಡಿತೀನಿ ಅಂತ ಗೊತ್ತಾದ ಮ್ಯಾಲೆ ನೀನು ನನ್ನ ಹತ್ತರ ಯಾಕ ಬರಲಿಲ್ಲ?

**ಜಿಲೇಬಿ :** ಬರತೀನಿ ತೊಗೋ ನನ್ನ ಶೇಠ ಸಾಬ..... (ಎನ್ನುತ್ತ ಬರುವಳು).

**ಮೋಟುಮಲ್** ಹೀ, ಹೀ, ಹೀ, (ಎಂದು ನಗುತ್ತ ತಿರುಗುತ್ತಾನೆ) ಏ ನೀವು ಇನ್ನೂ ಇಲ್ಲಿದ್ದೀರಿ.

**ಭಿಕ್ಕು :** ನೀವು ಬಹಳ ವಿಚಿತ್ರ ವ್ಯಕ್ತಿ ಕಾಣಸ್ತೀರಿ.

**ಮೋಟುಮಲ್** ನನಗ, ಇದರಾಗ, ಸುಖ ಸಿಗತದ.

**ಟುಕ್, ಟುಕ್ :** ನೀವು ಹುಟ್ಟಿದಾಗಿನಿಂದ ಹೀಗೆ ಇದ್ದಿರೇನು?

**ಮೋಟುಮಲ್** ಅಂದ್ರ ಇಷ್ಟು ದಪ್ಪ.

**ಭಿಕ್ಕು :** ಅಲ್ಲ ಇಷ್ಟು ಮೂರ್ಖ.

**ಮೋಟುಮಲ್** ಏನಂದಿ? ನಾನು, ನಾನು, ಜಿಲೇಬಿಗಂಡ, ಪೇಡಾ ಮತ್ತು ರಸಗುಲ್ಲಾರ ಅಪ್ಪ ಇದ್ದೀನಿ. ನನ್ನ ಮನಸ್ಸಿಗೆ ಬಂದಂಗ, ನಾ ಮಾಡತೀನಿ, ನೀವು ಯಾರು ನನ್ನ ಕೇಳಲಿಕ್ಕ. ಇಲ್ಲಿಂದ ಹಾಳಾಗಿ ಹೋಗ್ರಿ. ಇಲ್ಲಾಂದ್ರ ನಿಮ್ಮನ್ನ,...... ನಿಮ್ಮನ್ನ,...... ಖತಮ್ ಮಾಡಿಬಿಡತೀನಿ.

**ಭಿಕ್ಕು :** ಖತಮ್ ಮಾಡ್ತಿ. ಮಾಡು ಹಂಗಾರ ನೋಡೋಣ. (ಮೋಟುಮಲ್, ಏಳಲು ಪ್ರಯತ್ನಿಸುತ್ತಾನೆ. ಏಳಲು ಆಗುವುದಿಲ್ಲ)

**ಮೋಟುಮಲ್** ಥೂ, ಹಾಳಾದವ್ರೆ, ಸಮೀಪ ಬರ್ರಿ, ಅಂದ್ರ ನಿಮಗ ನಾಕು ಒದಿತೀನಿ.

**ಟುಕ್, ಟುಕ್ :** ನಿಮಗ ನಮ್ಮನ್ನ ಒದಿಲೇಬೇಕು ಅನ್ನಿಸಿದರ ನೀನೇ ಎದ್ದು ಬಾ, ದಮ್ಮ ಇದ್ರೆ.....

**ಮೋಟುಮಲ್** (ಉದ್ವೇಗದಿಂದ) ಖಾಲಿಹೊಟ್ಟೆ ದೊಡ್ಡಬಾಯಿ ನಿಮ್ಮದು. ಮೂರ್ಖರೇ ನಾಡಮೂರ್ಖರೆ! ನಿಮ್ಮ ನಾಲಿಗೆ ಸೀಳಿ ಉಪ್ಪು ತುಂಬತೀನಿ. ನಾ ಅಂದ್ರ ಏನಂತ ತಿಳಿಕೊಂಡೀರಿ (ಕೂಗುತ್ತಾ) ಏ ಪೇಡಾ, ಏ ರಸಗುಲ್ಲಾ, ಏ ಜಿಲೇಬಿ ನೋಡ್ತಾ ಇರಿ ಮಕ್ಕಳರೇ, ನನ್ನ ಮನಿ ಮಂದಿ ಸೇರಿ, ನಿಮ್ಮಿಬ್ಬರನ್ನ ಹೊಡದು, ಬಡದು ಹಣ್ಣುಗಾಯಿ, ನೀರಗಾಯಿ ಮಾಡತಾರ. (ಹೀಗೆ ಎನ್ನುತ್ತಾ ನಿದ್ರೆ ಮಾಡಿದಂತೆ ಮಲಗುತ್ತಾನೆ. ಪೇಡಾ, ರಸಗುಲ್ಲಾ, ಒಂದು ದೊಡ್ಡ ಸಮೋಸಾ ತರುತ್ತಾರೆ. ಅವರ ಹಿಂದೆ ಜಿಲೇಬಿಯೂ ಬರುತ್ತಾಳೆ.)

**ಪೇಡಾ + ರಸಗುಲ್ಲಾ :** ಅಪ್ಪಾ, ತೊಗೋ, ನಮ್ಮ ಭಾಗದ ಸಮೋಸಾನೂ ನೀವೇ ತಿನ್ನಿರಿ.

**ಭಿಕ್ಕು :** ಈಗ ಅವರು ಏನೂ ಕೇಳಿಲಿಕ್ಕೆ ಸಾಧ್ಯ ಇಲ್ಲ. ಕುಂಭಕರ್ಣ ಮಲಗಿದಂಗ ಮಲಿಗ್ಯಾರ.

**ಟುಕ್, ಟುಕ್ :** ಇಕಾ ಮಕ್ಕಳೆ, ನಾನು ಟುಕ್, ಟುಕ್ ಭಯ್ಯಾ, ಇಕಿ ಭಿಕ್ಕು, ಇವರು ಖರೇನೇ ನಿಮ್ಮ ತಂದಿ ಏನು?

**ಪೇಡಾ :** ಹುಂ ನಮ್ಮ ದುರ್ದೈವ.

**ಜಿಲೇಬಿ :** ಅದಕ್ಕೆ ನಾವು ಇಂವ ಏನಂದ್ರೂ ಕೇಳತೀವಿ.

ರಸಗುಲ್ಲಾ : ನಮ್ಮ ಪಾಲಿನ ಊಟ, ತಿಂಡಿ ಸಹ ಪಿಟ್ ಅನ್ನದ ಕೊಟ್ಟುಬಿಡತೀವಿ.

ಭಿಕ್ಕು : ನಿಮ್ಮ ತಂದಿ ಹುಟ್ಟಿದಾಗಿನಿಂದ ಹೀಗೆ ಇದ್ದಾರೇನು?

ಪೇಡಾ : ಇಲ್ಲ. ಮೊದಲು ಭಾಳ ಒಳ್ಳೆಯವರು ಇದ್ರು. ನಮ್ಮನ್ನ ಬಹಳ ಪ್ರೀತಿ ಮಾಡತಿದ್ದರು. ಇಂತಹ ತಂದಿನ್ನ ಪಡೆದ ನಮ್ಮ ಜನ್ಮ ಸಾರ್ಥಕ ಆಯ್ತು ಅಂತ ನಾವೆಲ್ಲ ಖುಷಿಪಟ್ಟಿದ್ದೀವಿ.

ಜಿಲೇಬಿ : ಹಿಂಗಿರಬೇಕಾದ್ರ, ಒಂದಿನ ಊಟಕ್ಕೆ ಕುಳಿತಾಗ, ಹುಡುಗರಿಗೆ ಆ ದಿನ ಮಾಡಿದ ಪಾಲಕ ಪನ್ನೀರ್, ಹಾಕಿದೆ ಮಕ್ಕಳು ಅದು ನಮಗ ಸೇರಂಗಿಲ್ಲ, ಬ್ಯಾಡಾಂದ್ರು. ನಮಗ, ಸಕ್ರಿ, ರೊಟ್ಟಿ ಬಾಳೆಹಣ್ಣು ಬೇಕು ಅಂತ ಅಳಲಿಕ್ಕೆ ಶುರು ಮಾಡಿದರು. ಇವರಿಗೆ ಸಿಟ್ಟು ಬಂತು. ಚೀರಿ, ಚೀರಿ, ಏ ಧಡ್ಡ ಸೂಳೆಮಕ್ಕಳೇ, ಯಾಕ ಅಳತೀರಿ, ನಾನು ಈ ಮನಿ ಮಾಲಿಕ. ಇಲ್ಲಿ ನಾ ಹೇಳಿದಂಗ ನಡೀಬೇಕು. ನಾನು ಈ ಮನಿಗೆ ಹಿರಿಯ, ನಿಮ್ಮೆಲ್ಲಾರಿಗಿಂತ ನನಗ ಹೆಚ್ಚಿನ ಭಾಗ ಸಿಗಬೇಕು ಅಂತ ಒದರಾಡಲಿಕ್ಕೆ ಶುರುಮಾಡಿಬಿಟ್ಟರು.

ಪೇಡಾ : ಅವತ್ತಿನಿಂದ ಇವರ ಸ್ವಭಾವನೇ ಬದಲೀ ಆಗಿ ಕೂತದ. ಒಂದೇರೀತಿ ತಿನ್ನಲಿಕ್ಕೆ ಕಲಿತರು. ೨೪ ಗಂಟೆ ತಿನ್ನೋದೇ ತಿನ್ನದು. ಮಿಠಾಯಿ, ತಿನ್ನಲಿಕ್ಕೆ ಶುರುಮಾಡಿದರೇ, ಬರೇ ಅದೇ ಸಮೋಸಾ ತಿನ್ನಲಿಕ್ಕೆ ಶುರುಮಾಡಿದ್ರೆ ಬರೇ ಅದೇ.

ಜಿಲೇಬಿ : ಇಷ್ಟು ಅತೀ ತಿಂದು, ತಿಂದು ಪರಿಣಾಮ ಏನಾಯ್ತು ಅಂತ ಈಗ ನಿಮ್ಮ ಕಣ್ಣಿಗೆ ಕಾಣಿಸ್ತಾ ಇದೆಯಲ್ಲ. ಏಳಲಿಕ್ಕೆ ಸಾಧ್ಯ ಇಲ್ಲ, ಅಳ್ಯಾಡಲಿಕ್ಕೆ ಸಾಧ್ಯ ಇಲ್ಲ. ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು ಅನ್ನೋ ಹಾಗೆ, ಮನ್ಯಾಗ ಇದ್ದುದೆಲ್ಲ ಮುಗಿದು ಹೋಯಿತು. ಕೆಲಸ ಬಿಟ್ಟು ಕೂತರು. ಬಂಗಾರ, ಮನಿ, ಆಸ್ತಿ, ಎಲ್ಲಾ ಮುಗಿತು. ಈಗೀಗ ಇದು ಒಂದು ದೊಡ್ಡ ಕಾಯಿಲೆ ಆಗೆದಂತ. ಅದಕ್ಕೆ ಔಷಧೀನೇ ಇಲ್ಲ. ಔಷಧಿ ಅಂದ್ರ ಅವರು ಕೇಳಿದ್ದ ಕೊಡೋದು ಅಂತ ಡಾಕ್ಟರ ಹೇಳ್ಯಾರ. ಹಿಂಗಾಗಿ ನಾನು, ಹುಡುಗರು, ಕಷ್ಟಪಟ್ಟು ಅವರ ಹೊಟ್ಟೆಗೆ ಭರ್ತಿ ಮಾಡ್ತಾ ಇರತೀವಿ.

ರಸಗುಲ್ಲಾ : ನನಗ ರಸಗುಲ್ಲಾ ಅಂತಾನ, ತಾ ನೋಡಿದರೆ ಉಬ್ಬಿ, ಉಬ್ಬಿ ಗೋಲಪಕೋಡ ಆಗ್ಯಾನ.

ಪೇಡಾ : ಒಂದು ಮಾತಿಲ್ಲ, ಒಂದು ಆಟ ಇಲ್ಲ, ಪಾಟ ಇಲ್ಲ.

ರಸಗುಲ್ಲಾ : ಬರೇ ತಿನ್ನದು, ನಮ್ಮನ್ನ ಬಯ್ಯೋದು.

ಜಿಲೇಬಿ : ಇದು ನಮ್ಮ ಪರಿಸ್ಥಿತಿ.

ಮೋಟುಮಲ್ : (ಕಣ್ಣು ತೆಗೆದು) ಊಟಾ, ಊಟಾ, ಈ ಹೊಲಸ ಸಮೋಸ ನನಗೆ ಬ್ಯಾಡ. ನನಗ ರಸಮಲಾಯಿ ಬೇಕು, ಗುಲಾಬ ಜಾಮೂನು ಬೇಕು, ಕಲಾಕಂದ್ ಬೇಕು, ಏ ರಸಗುಲ್ಲಾ, ಎಲ್ಲೆವ ಇವೆಲ್ಲ.

ರಸಗುಲ್ಲಾ : ಮಾಡೇ ಇಲ್ಲ, ರೇಶನ್ ಅಂಗಡ್ಯಾಗ ಸಕ್ಕರಿ ಇಲ್ಲಂತ.

ಮೋಟುಮಲ್ ಬಾಜಾರದಾಗ ತೊಗೊಂಬಾ.

ಪೇಡಾ : ಅಲ್ಲೇನೂ ಮುಗದ ಹೋಗೇದ.

ಮೋಟುಮಲ್ ಬ್ಲಾಕ್ ಮಾರ್ಕೆಟಿನಾಗ ತರಲಿಕ್ಕ ಏನು ಧಾಡಿ ಆಗೆದ ನಿಮಗ?

ಜಿಲೇಬಿ : ಮನ್ಯಾಗ ಏನ ರೊಕ್ಕದ ಗಿಡ ಹಚ್ಚೇರಿ ಏನು? ಹುಡುಗರು ಮೆಹನತ್ ಮಾಡಿ ತರಕಾರಿ ತಂದಾರ, ನಾನೂ ಕಷ್ಟಪಟ್ಟು ಹಿಟ್ಟು ಸಂಪಾದಿಸಿದೆ ಅಂತ ಈ ಸಮೋಸ ತಯಾರ ಆಗೆದ. ಬೇಕಾದರ ತಿನ್ನಿರಿ, ಸಾಕಾದರ.......

ಮೋಟುಮಲ್ ಸರೆ ಹಂಗಾರ ತಾ ತಿಂತೀನಿ. ಆದ್ರ ನೀವು ಒಂದು ಹಾಡು ಹೇಳ್ರಿ, ಆದರಾಗ ಎಲ್ಲಾ ತಿನ್ನೋ ತಿಂಡಿಗಳ ಬಗ್ಗೆ ಇರಲಿ. (ಪೇಡಾ ರಸಗುಲ್ಲಾ ಜಿಲೇಬಿ ಊಟದ ವರ್ಣನೆಯ ಹಾಡನ್ನು ಉದಾಸೀನತೆಯಿಂದ ಹಾಡುವರು. ಮೋಟುಮಲ್ ಕಟ್ಟಿಗೆಯ ಚಮಚೆಯಿಂದ ತಾಳ ಹಾಕುತ್ತಾನೆ. ಮಧ್ಯೆ ಮಧ್ಯೆ ಸಮೋಸಾ ತಿನ್ನುತ್ತಿರುತ್ತಾನೆ.)

ಊಟದ ಹಾಡು

(ಮೋಟುಮಲ್ ಹಾಡು ಕೇಳುತ್ತಾ ಮಲಗುವನು)

ರಸಗುಲ್ಲಾ : ನಮ್ಮಪ್ಪನ ಸಲುವಾಗಿ ಹಾಡುವ ಈ ಊಟದ ಹಾಡಿಗೆ ಈ ನಮ್ಮ ಹೊಟ್ಟೆ ತಾಳ ಹಾಕಲಿಕ್ಕೆ ಹತ್ತೆದ.

ಭಿಕ್ಕು : ಆ ಸಮೋಸ ತೊಗೊಂಡು ಯಾಕ ತಿನ್ನಬಾರದು.

ಜಿಲೇಬಿ : ಬ್ಯಾಡಮ್ಮ ಬ್ಯಾಡ, ನಾವು ಹಂಗ ಮಾಡ್ಲಿಕ್ಕೆ ಸಾಧ್ಯ ಇಲ್ಲ.

ಟುಕ್, ಟುಕ್ : ಆದರೆ ನಮಗ ಸಾಧ್ಯ ಅದ (ಸಮೋಸಾ ತೆಗೆದು ಹುಡುಗರಿಗೆ ಕೊಡುತ್ತ) ತೊಗಳ್ರಿ, ತನ್ನಿರಿ, ನನ್ನ ಕಡಿಂದ ತಿನ್ನರಿ. (ಹುಡುಗರು ತಿನ್ನುತ್ತಾರೆ).

ಜಿಲೇಬಿ : ಅಯ್ಯಯ್ಯೋ ಇದೇನಿದು, ಅನಾಹುತನೇ ಆಯ್ತು, ಒಂದು ವೇಳೆ ಎದ್ದರಂದ್ರ, ನಮ್ಮ ಜೀವ ಹಿಂಡತಾರ.

ಭಿಕ್ಕು : ಏನೂ ಹಿಂಡಂಗಿಲ್ಲ...... ನೀವು ಒಂದು ಕೆಲಸ ಮಾಡ್ತಿರ ನಮ್ಮ ಹಿಂದ ಅಡಗಿ ನಿಲ್ಲರಿ.

(ಮೋಟುಮಲ್ಲನಿಗೆ ಎಚ್ಚರವಾಗಿ)

ಮೋಟುಮಲ್ ನನ್ನ ಸಮೋಸಾ, ನನ್ನ ಸಮೋಸಾ, ಓಹೋ ನಾನೇ ನಿದ್ದಿಗಣ್ಣಾಗ ತಿಂದಿರಬೇಕು ಕಾಣಸ್ತದ. ರಸಗುಲ್ಲಾ, ಜಿಲೇಬಿ..... ಖೀರು..... ನನಗ ಖೀರು ಬೇಕು.

ಭಿಕ್ಕು : ಇಕಾ ನಿಮ್ಮ ಖೀರು.

ಮೋಟುಮಲ್ ತಾ ಇಲ್ಲಿ ತಾ (ಕುಡಿದು ಉಗುಳಿ) ಥೂ, ಥೂ, ಇದೇನಿದು ಇದು ಖೀರು ಅಲ್ಲ, ಕಟ್ಟ ಒಗರು ಅದ.

ಟುಕ್, ಟುಕ್ : ಸುಮ್ಮನೆ ಬಾಯಿಮುಚ್ಚಿಕೊಂಡು ಕುಡೀರಿ. ನಿಮ್ಮ ದೇಹಕ್ಕ ಬಹಳ ಒಳ್ಳೆಯದು.

ಮೋಟುಮಲ್ (ಇಬ್ಬರನ್ನೂ ಗುರುತಿಸಿ) ಅರೆ, ಮೋಸ, ನೀವು ಸ್ವಲ್ಪ ತಡೀರಿ, ನಿಮ್ಮನ್ನ ಸುಮ್ಮನೆ ಬಿಡಂಗಿಲ್ಲ (ಬಹಳ ಕಷ್ಟದಿಂದ ತೆವಳುತ್ತ ಅವರನ್ನು ಅಟ್ಟಿಸಿಕೊಂಡು ಓಡುತ್ತಾನೆ,

ಗೀತ ಭುಕ್, ಭುಕ್, ಭಯ್ಯಾ ಕಾಲಮ್ ಕಾಲ್

ಮೂರೂಜನ ಈರೀತಿ ರಂಗದ ಮೇಲೆ ಸುತ್ತುತ್ತಾರೆ.

ಟುಕ್, ಟುಕ್ : ಇದೇನಿದು, ನಮಗ ಓಡಿದಂಗ ಅನಿಸ್ತಾನೆ ಇಲ್ಲ. ಬಾ ಭಿಕ್ಕು ಸ್ವಲ್ಪ ಕೂಡೋಣ (ಮೋಟುಮಲ್ ಹತ್ತಿರ ಬರುತ್ತಾನೆ. ಪ್ರೇಕ್ಷಕರಿಗೆ ನೀವು) ನೋಡ್ತಾ ಇರಿ ಎಂದು ಹೇಳಿ ಒಂದು ಹೆಜ್ಜೆ ಮುಂದೆ ಸರಿಯುತ್ತಾನೆ. ಮೋಟುಮಲ್ ಅವರನ್ನು ಹಿಡಿಯಲು ಹೋಗಿ ಬೀಳುತ್ತಾನೆ........ ಎದ್ದು ಮತ್ತೆ ಓಡುತ್ತಾನೆ....... ಹೀಗೆ ಪ್ರತಿಯೊಂದು ಸುತ್ತು ಹಾಕಿದ ಹಾಗೆಲ್ಲ ಅವನ ದೇಹದ ದಪ್ಪ ಕಮ್ಮಿಯಾಗುತ್ತ ಹೋಗುತ್ತದೆ. ಕೊನೆಗೆ ಅವನು ಮಾಮೂಲಿ ಮನುಷ್ಯನ ಆಕಾರಕ್ಕೆ ಬಂದಿರುತ್ತಾನೆ.)

ಮೋಟುಮಲ್ ನಿಂದ್ರಿ ಮಾರಾಯರ, ಸಾಕು ಓಡೋದು, ನಾನು ನಿಮಗ ಏನೂ ಮಾಡಂಗಿಲ್ಲ. ನನಗ ಉಸಿರು ಕಟ್ಟುತಾ ಇದೆ. ದಯಮಾಡಿ ನಿಲ್ಲರಿ.

ಭಿಕ್ಕು : ಅರೆ, ನೋಡಿಲ್ಲ, ಎಷ್ಟು ತೆಳ್ಳಗ ಆಗ್ಯಾನ ಇವ.

ಟುಕ್, ಟುಕ್ : ಹೌದಲ್ಲ, ಈಗ ಮನಿಶ್ಯಾ ಕಂಡಂಗ ಕಾಣಸ್ತಾನ. ಇದು ನಾವು ಕೊಟ್ಟ ಆ ಔಷಧಿ, ಮತ್ತ ಇವ ಓಡಾಡಿದ ಪ್ರಭಾವ ಇರಬೇಕು.

ಮೋಟುಮಲ್ ವಾಹ, ವಾಹ ! ಬಹಳ ವಿಚಿತ್ರ ಆಗಲಿಕ್ಕ ಹತ್ತೆದ. ನನ್ನಷ್ಟಕ್ಕ ನಾನು ಬಹಳ ಹಗುರ ಕಾಣಿಸಲಿಕ್ಕ ಹತ್ತೀನಿ. (ಕೂಗುತ್ತಾ) ಪೇಡಾ, ರಸಗುಲ್ಲಾ..... ಜಿಲೇಬಿ.

ಜಿಲೇಬಿ : (ಹತ್ತಿರ ಬಂದು) ಅರೆ ಯಾರ್‍ರಿ ನೀವು?

ಮೋಟುಮಲ್ ಅರೆ ಮೇರಿ ಪ್ಯಾರಿ, ಜಿಲೇಬಿ, ನಿನ್ನ ಗಂಡನ ಪರಿಚಯ ನಿನಗಿಲ್ಲ? ಯಾಕ? ಏನಾಯ್ತು?

ಜಿಲೇಬಿ : ದೇವರೆ, ದೇವರೆ, ಎಷ್ಟು ತೆಳ್ಳಗೆ ಆಗಿ ಕೂತಿರಿ. ಏ ಹುಡುಗರೆ, ನಿಂತು ಏನು ನೋಡ್ತಾ ಇದ್ದೀರಿ. ಓಡಿಹೋಗ್ರಿ, ಹೋಗಿ ನಿಮ್ಮ ತಂದಿಗೆ, ತಿನ್ನಲಿಕ್ಕ ಏನಾದರೂ ತನ್ನಿರಿ.

ಮೋಟುಮಲ್ ಏ, ಏ, ತಡಿ. ಇನ್ನ ನಾ ಸಿಕ್ಕಂಗ ತಿನ್ನಂಗಿಲ್ಲ. ಇವತ್ತೇ ಕಡೆ. ಮತ್ತ ನಾ ದಪ್ಪ ಆಗಂಗಿಲ್ಲ. ತೆಳ್ಳಗೆ ಇರೋ ಆನಂದ ಎಲ್ಲಿಯೂ ಸಿಗಲಿಕ್ಕೆ ಸಾಧ್ಯ ಇಲ್ಲ ಅಂತ ನನಗ ಇವತ್ತು ಅನುಭವಕ್ಕ ಬಂತು. ಬಾ ಜಿಲೇಬಿ ಬಾ ನಾಚ್ ಮೇರೆ ಸಾಥ್.

ಜಿಲೇಬಿ : ಮತ್ತೆ, ಮತ್ತೆ ನನ್ನ ಜಿಲೇಬಿ ಅಂತ ಕರೆದರೆ ನಾ ಬರಲಿಕ್ಕೆ ಸಾಧ್ಯ ಇಲ್ಲ.

ಮೋಟುಮಲ್ ಕ್ಷಮಿಸು ದೇವಿ ಜಾಹ್ನವಿ, ಕ್ಷಮಿಸು. ಇನ್ನ ಎಲ್ಲಾ ಹೆಸರು ಬಂದ. ರಸಗುಲ್ಲಾ ಇವತ್ತಿನಿಂದ ನನ್ನ ಮೊದಲಿನ ಪ್ರೀತಿಯ ರಮೇಶಚಂದ್ರ ಮತ್ತ ನನ್ನ ಪೇಡಾ ಪ್ರಕಾಶಚಂದ್ರ. ನನಗ ಈಗ ಕಣ್ಣಿಗೆ ಊಟ ಕಾಣಿಸ್ತಾ ಇಲ್ಲ, ಹಸಿವಿ ಕಾಣಿಸ್ತಾ ಇಲ್ಲ, ಬಾ ಜಾಹ್ನವಿ, ಬಾ ರಮೇಶ, ಬಾ ಪ್ರಕಾಶ.

ಇಬ್ಬರೂ ಹುಡುಗರು : ನಮ್ಮ ಹೆಸರುಗಳು ವಾಪಾಸ್ ಬಂದ್ರೆ ಏನು ಪ್ರಯೋಜನ ಅದರಿಂದ ನಮ್ಮ ಹಸಿವಿ ಹಿಂಗತದ ಏನು?

ಮೋಟುಮಲ್ : ಇನ್ನ ನೀವು ಹಸಿವಿಯಿಂದ ಇರಲಿಕ್ಕ ಸಾಧ್ಯ ಇಲ್ಲ. ನಾನು ಇವತ್ತಿನಿಂದ ಪುನಃ ಕೆಲಸ ಮಾಡತೀನಿ. ಮತ್ತ ನಿಮ್ಮನ್ನೆಲ್ಲ ನನ್ನ ಮೆಹನತ್‌ನಿಂದ ಸಾಕತೀನಿ.

ಗೀ ಛುಕ್, ಛುಕ್, ಭಯ್ಯಾ ತಾಲಮ್ ತಾಲ್

ಜಾಹ್ನವಿ (ಜಿಲೇಬಿ)  ಹಿಂಗಾ?

ಮೋಟುಮಲ್ : ಹೌದು (ಭಿಕ್ಕು ಮತ್ತು ಭಯ್ಯಾನ ಕಡೆ ತಿರುಗಿ) ನೀವು ಇಲ್ಲಿವರೆಗೆ ಬಂದು ನನಗ ಬುದ್ಧಿ ಕಲಿಸಿ ಬಹಳ ಉಪಕಾರ ಮಾಡಿದಿರಿ.

ಟುಕ್, ಟುಕ್ : (ಮೋಟುಮಲ್ಲನ ಕೈಗಾಡಿಯನ್ನು ದಿಟ್ಟಿಸಿ ನೋಡುತ್ತಾ) ಇದರಾಗ ಉಪಕಾರದ ಮಾತ ಏನು ಬಂತು, ತೆಳ್ಳಗಾಗಿರುವ ಮೋಟುಮಲ್ಲರೆ, ಆದರೆ.......

ಭಿಕ್ಕು : .... ನೀವು ನಮ್ಮ ಒಂದು ಬೇಡಿಕೆಯನ್ನು ಪೂರೈಸಬೇಕು.

ಮೋಟುಮಲ್ : ಹೇಳ್ರಿ ಅವಶ್ಯ ಹೇಳ್ರಿ.

ಟುಕ್, ಟುಕ್ : ನಿಮ್ಮ ಈ ತಳ್ಳುವ ಗಾಡಿಯನ್ನು ನಮಗೆ ಕೊಡಬೇಕು.

ಮೋಟುಮಲ್ : ನನ್ನ ಈ ಕುರ್ಸಿ! ಓಹೋ ಆಗತ್ಯವಾಗಿ ತೆಗೆದುಕೊಂಡು ಹೋಗ್ರಿ. ನನಗ ಈಗ ಅದರ ಅವಶ್ಯನೇ ಇಲ್ಲ. (ಎಲ್ಲರೂ ಊಟದ ಹಾಡನ್ನು ಹಾಡುತ್ತ ಆನಂದದಿಂದ ಹೋಗುವರು)

ಟುಕ್, ಟುಕ್ : ನನಗನ್ನಿಸೋದು ಏನೆಂದರೆ, ಇದು ಸಹ ನಮ್ಮ ಇಂಜನ್ನಿನ ಒಂದು ಭಾಗ ಇರಬೇಕು.

ಭಿಕ್ಕು : ಖರೆ, ಖರೆ (ಗಾಡಿಯನ್ನು ತಳ್ಳುತ್ತ ಇಂಜನ್ನಿನ ಉಳಿದ ಭಾಗಗಳ ಜೊತೆ ಸೇರಿಸುತ್ತಾಳೆ)

ಟುಕ್, ಟುಕ್ ; ಬಿಲ್‌ಕುಲ್, ಕರೆಕ್ಟ ಸೈಜ.... ನಾವು ಸರಿ ಹಾದ್ಯಾಗ ಹೊಂಟೇವಿ.

ಭಿಕ್ಕು : ಹೀಗೆಯೇ ಮುಂದುವರಿದರೆ, ನಮ್ಮ ಇಂಜನ್ನಿನ ಎಲ್ಲಾ ಭಾಗಗಳು ಸಿಗಬಹುದು ಅಂತೀರಿ?

ಟುಕ್, ಟುಕ್ : ಬರಾಬರ್ ಸಿಗ್ತಾವ – ಭಿಕ್ಕು ನಿನಗ ರಾಮಾಯಣದ ಕಥಿ ಗೊತ್ತಿರಬೇಕಲ್ಲ! ರಾವಣ ಸೀತಾದೇವಿಯನ್ನ ಲಂಕಾಕ್ಕ ಹಾರಿಸಿಕೊಂಡು ಹೋಗುವಾಗ, ಆ ದೇವಿ ಆಭರಣಗಳು ಅಲ್ಲಿ, ಇಲ್ಲಿ ಬಿದ್ದಹಾಗೆ, ಚಿಡ್, ಚಿಡ್‌ದಾಸ, ನನ್ನ ಇಂಜನ್ನ ಕಿತ್ತುಕೊಂಡಾಗ, ಸಹಿತ ಅದರ ಭಾಗಗಳು ಬಿದ್ದು ಹೋಗಿದೆ. ನಾವು ಹುಡುಕುತ್ತಾ ಇದೇ ಹಾದಿಯಲ್ಲಿ ಹೋಗೋಣ ಬಾ, ಕೂಡು.

ಭಿಕ್ಕು : ಬೇಡಾ, ನೀವು ಕೂಡ್ರಿ, ಈಗ ಕೂಡೋ ಪಾಳಿ ನಿಮ್ಮದು ಅದ.

ಟುಕ್, ಟುಕ್  ಹೂಂ, ಹೂಂ. ಹೆಂಗಸರು ಮೊದಲು.

ಭಿಕ್ಕು : ಸಾಧ್ಯ ಇಲ್ಲ. ದೊಡ್ಡೋರು ಮೊದಲು, ಯಾಕಂದ್ರ ಹುಡುಗರು ಹಿರಿಯರಿಗೆ ಮರ್ಯಾದೆ ಕೊಡಬೇಕು.

ಟುಕ್, ಟುಕ್  ಹೌದಾ! ಮತ್ತ ಆ ಮೋಟುಮಲ್‌ನೂ ದೊಡ್ಡವ ಇದ್ದ ಅವನಿಗೆ, ಹಾಗಲಕಾಯಿ ರಸ ಕುಡಿಸಿ, ಓಡಾಡಿಸಿದಿ. ನೀ ಹಿರಿಯರಿಗೆ ಮರ್ಯಾದಿ ಕೊಡೋದು ಇದೇ ಏನು?

ಭಿಕ್ಕು : ಭಯ್ಯಾ, ಅಂವ ಹುಡುಗರಂಗ ಮಾಡಲಿಕ್ಕ ಹತ್ತಿದ್ದ. ಹಿರಿಯರು, ಹಿರಿಯರಂಗ ಇದ್ದರೆ, ಮರ್ಯಾದಿ ಸಿಗ್ತದ.

ಟುಕ್, ಟುಕ್  ಅಯ್ಯ ಅಯ್ಯ ಸಾಕು ಮಾಡು ತಾಯಿ. ನಿನ್ನ ಜೊತೆಗೆ ಮಾತಾಡಿ ಯಾರು ಗೆದ್ದಾರ? ನಾವಿಬ್ಬರೂ ತಳ್ಳಿಕೊಂಡು ಹೋಗೋಣ ಆಯ್ತಾ?

ಭಿಕ್ಕು : ಜರೂರು, ನಡ್ರಿ, ಇನ್ನಾ ತಳ್ಳಿರಿ, ಹೈಸಾ, ಕಾಲು ಒತ್ತಿ ದಬ್ಬಿರಿ, ಹೈಸಾ, ಹೈಸಾ, (ಎನ್ನುತ್ತ ಇಬ್ಬರೂ ಅದನ್ನು ತಳ್ಳಿಕೊಂಡು ರಂಗದಿಂದ ಹೋಗುವರು)

## ದೃಶ್ಯ — ೫

(ರಂಗಸ್ಥಳದ ಹಿನ್ನೆಲೆಯಲ್ಲಿ ದೊಡ್ಡ ರೈಲಿನ ಇಂಜನ್ನ ಇದೆ. ಅದರ ಮೇಲೆ ಆಯಾಸ ಹೊಂದಿದ ಭಯ್ಯಾ ಹಾಗೂ ಭಿಕ್ಕು ಕುಳಿತಿದ್ದಾರೆ. ಮುಂಭಾಗದಲ್ಲಿ ಒಂದು ದೊಡ್ಡ ಟೇಬಲ್ ಮೇಲೆ ಅನೇಕ ಯಂತ್ರದ ಭಾಗಗಳು, ದೊಡ್ಡ ದೊಡ್ಡ ಗಡಿಯಾರಗಳು, ಟ್ಯೂಬಗಳು, ಪೈಪುಗಳು ಇವೆ. ರಾಕೆಟ್‌ನ ಕೆಳಗೆ ಕತ್ತಲು ಇದೆ.)

ಭಿಕ್ಕು : ನಾವೆಲ್ಲಿದ್ದೀವಿ?



ಟುಕ್, ಟುಕ್ : ನನಗೆ ತಿಳೀತಾ ಇಲ್ಲ.

ಭಿಕ್ಕು : ತಿಳೀತಾ ಇಲ್ಲ. ಹಿರಿಯರಿಗೆ ಎಲ್ಲಾ ತಿಳಿತದೆ ಎಂದುಕೊಂಡಿದ್ದೆ.

ಟುಕ್, ಟುಕ್ : ಎಲ್ಲಾ ಹೇಗೆ ತಿಳಿಯಲು ಸಾಧ್ಯ? ನಾನು, ಓದಿ ಬರೆಯೋ ಯಂತ್ರ ಇರಬಹುದು ಅಂತ ಗೊತ್ತೇ ಇರಲಿಲ್ಲ! ದಪ್ಪ ವ್ಯಕ್ತಿ ಒಂದು ಗ್ಲಾಸ್ ಕಷಾಯ ಕುಡಿದು ೫ ನಿಮಿಷದಲ್ಲಿ ತೆಳ್ಳಗೆ ಆಗಬಹುದು ಎಂದು ಯೋಚಿಸಲಿಕ್ಕೆ ಸಾಧ್ಯವಿಲ್ಲ. ಇನ್ನು ಏನೇನು ತಿಳೀಬೇಕಾಗಿದೆಯೋ, ಏನೋ?

ಭಿಕ್ಕು : ಅದೇನರ ಇರ್ಲಿ, ಇಲ್ಲೇನು ಬಿದ್ದ ಹಾಗಿದೆ ಸ್ವಲ್ಪ ನೋಡಿ.

ಟುಕ್, ಟುಕ್ : ಇಷ್ಟು ಕತ್ತಲೆಯಲ್ಲಿ ಏನೂ ಕಾಣಿಸ್ತಾನೇ ಇಲ್ಲ. ಸ್ವಲ್ಪ ಬೆಳಕು ಬರ್ಲಿ, ಆರಾಮವಾಗಿ ಎಲ್ಲವನ್ನೂ ನೋಡಬಹುದು.

ಭಿಕ್ಕು : ಬೆಳಕು ಬರುವವರೆಗೆ ಏನು ಮಾಡುವುದು?

ಟುಕ್, ಟುಕ್ : ಏನು ಮಾಡುವುದು? ಮಲಗುವದು.

ಭಿಕ್ಕು : ಮಲಗೋದರಾಗ ಏನೂ ಮಜಾ ಇಲ್ಲ...... ಹೋಗ್ಲಿ ಒಂದು ಜೋಗುಳದ ಹಾಡು ಹಾಡ್ರಿ.

ಟುಕ್, ಟುಕ್ : ಜೋಗುಳ ನನಗೆಲ್ಲಿ ಬರತದ. ನನಗ ಬರೋದು, ಬರೇ ರೈಲಿನ ಹಾಡು ಮತ್ತ ರೈಲು ಸ್ಟೇಶನ್ ಹಾಡು ಅಷ್ಟೆ

ಭಿಕ್ಕು : ರಾತ್ರಿ ಹೊತ್ತಿನಲ್ಲಿ ಇಂಜಿನ್ ಏನು ಮಾಡ್ತದ ?

ಟುಕ್, ಟುಕ್ : ಮಲಗತದ.

ಭಿಕ್ಕು : ಇಂಜನ್ ಸಹಿತ ಮಲಗತದ?

ಟುಕ್, ಟುಕ್ : ಹಾಂ, ಹಾಂ.

ಭಿಕ್ಕು : ಅದನ್ನ ಹೆಂಗ ಮಲಗಸ್ತೀರಿ?

ಟುಕ್, ಟುಕ್ : ಹಾಡಿ ಹಾಡಿ.

ಭಿಕ್ಕು : ಹಾಗಾದ್ರೆ ಅದೇ ಹಾಡು ಹೇಳಿ.

(ಇಂಜನ್ನಿನ ಜೋಗುಳ)

(ಹಾಡು ಮುಗಿಯುತ್ತಿದ್ದಂತೆ ಇಬ್ಬರೂ ಮಲಗುತ್ತಾರೆ. ಪ್ರೊಫೆಸರ್ ತಮ್ಮ ಸಹಾಯಕಿಯೊಂದಿಗೆ ಬರುತ್ತಾರೆ.

ಪ್ರೊಫೆಸರ್ : ಮೀರಾ ಯಾರೋ ಹಾಡು ಹಾಡ್ತಾ ಇದ್ದಂಗಿದೆಯಲ್ಲ. ನಿನಗೂ ಕೇಳಿಸಿತೇನು?

ಮೀರಾ : ಪ್ರೊಫೆಸರ್ ಸರ್, ಇಲ್ಲಿ ಯಾರೂ ಬರಲು ಅಪ್ಪಣೆಯೇ ಇಲ್ಲ. ಅಂದ್ರೆ ಇಲ್ಲಿ ಯಾರೂ ಇಲ್ಲವೆಂದೇ ಅರ್ಥ. ಇನ್ನೂ ಹಾಡು ಯಾರ ಹಾಡ್ತಾರ?

ಪ್ರೊ : ಅದೂ ಸರಿ. ನಮ್ಮ ಕೆಲಸ ಎಲ್ಲಿಯವರೆಗೆ ಬಂದಿದೆ ?

ಮೀರಾ : ಸರ್, ರಾಕೆಟ್ಟಿನ ಕೆಲಸ ಪೂರ್ತಿಯಾಯಿತು. ಇನ್ನು ಚಂದ್ರನ ಹತ್ತಿರ ಹೋಗುವ ವ್ಯಕ್ತಿಯ ವ್ಯವಸ್ಥೆಯಾಗಬೇಕು.

ಪ್ರೊ : ನಮ್ಮ ಕೆಲಸದ ಜನ ಎಲ್ಲಿ ಹೋದರು? (ಟೆಲಿಫೋನ್ ಎತ್ತಿ) ಏ, ಟಿಕ್ಕು, ಚಿಕ್ಕು ಎಲ್ಲಿ ಹೋಗೀರಿ ನೀವು?...... (ರಾಕೆಟ್ಟಿನ ಒಂದೊಂದು ಭಾಗ ಹಿಡಿದು ಟಿಕ್ಕು, ಚಿಕ್ಕು ಬರುತ್ತಾರೆ) ಸರ್, ಆ ರಾಕೆಟ್ ಮೇಲಿನ ಟಾಪ್ ಎಲ್ಲಿ ಇದೆ?

ಟಿಕ್ಕು : ಇನ್ನೂ ರೆಡಿ ಆಗಿಲ್ಲ...........

ಚಿಕ್ಕು : ಹೆಚ್ಚು ಕಮ್ಮಿ ತಯಾರ ಆಗ್ತಾ ಇದೆ. (ಹೋಗುವರು.)

ಪ್ರೊ : ಮಹಾಸೋಮಾರಿಗಳು. ಇಂಥ ಮಹತ್ವಪೂರ್ಣ ರಾಕೆಟ್‌ನಲ್ಲಿ ಕೆಲಸ ಮಾಡಲು ಅವಕಾಶ ಸಿಕ್ಕಿದ್ದಕ್ಕೆ ಖುಶಿ ಪಡಬೇಕು. ಇವು ನೋಡಿದರೆ, ಸುಮ್ಮನೆ ಟೈಮ್ ವೇಸ್ಟ್ ಮಾಡ್ತಾ ಇದ್ದಾವೆ.

ಮೀರಾ : ನಾವು ಈ ಟಿಕ್ಕು ಮತ್ತು ಚಿಕ್ಕುವನ್ನೇ ಚಂದ್ರನ ಮೇಲೆ ಹಾರಿಸಿದರೆ ?

ಪ್ರೊ : ಇಬ್ಬರನ್ನೂ ಹಾರಿಸಿದರೆ ಮುಂದಿನ ರಾಕೆಟ್ ತಯಾರು ಮಾಡೋ ಜನ ಎಲ್ಲಿ ಸಿಗ್ತಾರ?

ಮೀರಾ : ವಾಪಸ್ ಬಂದಮ್ಯಾಲೆ ಅವರೇ ಮಾಡ್ತಾರ,........ ಯಾಕ್....... ಓ......... ಒಮ್ಮೆ ಹೋದವರು ವಾಪಸ್ ಬರಲಿಕ್ಕೆ ಸಾಧ್ಯ ಇಲ್ಲಲ್ಲ !

ಪ್ರೊ : ಹೌದು, ಮತ್ತೆ. ಈ ನನ್ನ ರಾಕೆಟ್ ಅಲ್ಲಿವರೆಗೆ ಹೋಗಲು ಮಾತ್ರ ಸಾಧ್ಯ.

ಮೀರಾ : ಈ ರಾಕೆಟ್‌ನ ಯಾತ್ರಿಕರು, ಚಂದ್ರನ ಮ್ಯಾಲೆ ಏನು ಮಾಡಬೇಕು?

ಪ್ರೊ : ಏನು ಮಾಡಬೇಕು? ಇರಬೇಕು ಆರಾಮ. ಇರುವವರೆಗೆ!!

ಮೀರಾ : ಛೇ, ಛೇ, ನೀವು ಇಂಥ ಕೆಲಸ ಮಾಡ್ತೀರಿ ಎಂದು ನಾನು ಯೋಚಿಸಿರಲಿಲ್ಲ.

ಪ್ರೊ : ಮೀರಾ ಕೇಳಿಲ್ಲಿ. ನಾನು ಒಬ್ಬ ವಿಜ್ಞಾನಿ. ನನಗೆ ಅವಶ್ಯ ಇರೋದು ಈ ಚಂದ್ರನನ್ನು ಮುಟ್ಟುವುದು. ಅಲ್ಲಿ ವ್ಯಕ್ತಿ ಜೀವಿಸುವುದು ಸಾಧ್ಯ ಅನ್ನುವುದು ಆಗತ್ಯ. ಅಲ್ಲಿಗೆ ಹೋದ ಒಬ್ಬ ಮೂರ್ಖ ವ್ಯಕ್ತಿ ಹಿಂದಿರುಗಿ ಬರತಾನೆ, ಅಥವಾ ಇಲ್ಲ ಎನ್ನುವುದು ನನಗೆ ಅನವಶ್ಯಕ. ನಾನು ಹಿಡಿದ ಕೆಲಸದಲ್ಲಿ ಇವೆಲ್ಲವುಗಳಿಗಿಂತ ನನ್ನ ಕಾರ್ಯ ಪೂರ್ತಿ

ಆಗೋದು ಮುಖ್ಯ. ಈ ರಾಕೆಟ್ ವಾಪಸ್ ಬರುವುದಿಲ್ಲ ಎಂದು ನಾವೇ ಹೇಳೋದೇ ಬೇಡ. (ಪ್ರೇಕ್ಷಕರಿಗೆ) ಏನ್ರಿ, ನಿಮ್ಮಲ್ಲಿ ಯಾರಿಗಾದರೂ ಚಂದ್ರನ ಬಗ್ಗೆ, ಅವರ ಜನರ ಬಗ್ಗೆ ತಿಳಿಯುವುದರಲ್ಲಿ ಆಸಕ್ತಿ ಇದೆಯೇನು?

ಮೀರಾ : ಪ್ರೊಫೆಸರ್ ಸರ್, ಈ ಹುಡುಗರು ನಾವು ತಿಳಿದುಕೊಂಡಷ್ಟು ಮೂರ್ಖರಿಲ್ಲ. ನಾವು ಇಲ್ಲಿವರೆಗೆ ಮಾತನಾಡಿದ್ದು ಅವರ ಕಿವಿಗೆ ಬಿದ್ದೇ ಇದೆ.

ಪ್ರೊ : ಅಯ್ಯೋ ಅನರ್ಥವಾಯಿತಲ್ಲ, ಈಗೇನು ಗತಿ, ನಮ್ಮ ಬಹುಮುಖ್ಯ ಕಾರ್ಯ ಈಗ ಎಂದರೆ, ಚಂದ್ರಲೋಕಕ್ಕೆ ಯಾತ್ರೆ ಮಾಡೋ ಒಬ್ಬ ಯಾತ್ರಿಕನನ್ನು ಹುಡುಕುವುದು.

ಭಿಕ್ಕು : (ಏಳುತ್ತ) ಯಾತ್ರಾ? ಏನು ಯಾತ್ರಾ? ರೈಲು ಯಾತ್ರಾ ಏನು?

ಪ್ರೊ, ಮೀರಾ : ಇದೇನಿದು? ಯಾರು ಮಾತಾಡಿದ್ದು ?

ಭಿಕ್ಕು : ಭಯ್ಯಾ, ಓ ಭಯ್ಯಾ, ಏಳ್ರಿ..... ಪೂರ್ತಿ ಬೆಳಕ ಆಗೇದ.

ಟುಕ್, ಟುಕ್ : ಅರೆ, ಹೌದಲ್ಲ...... ನಡಿ ಮೊದಲು ನಾವು ಎಲ್ಲಿದ್ದೀವಿ ಅನ್ನುವುದರ ಪತ್ತಾ ಹಚ್ಚೋಣ.

ಮೀರಾ : ನೀವಿಬ್ಬರೂ ಅಪ್ಪಣೆ ಇಲ್ಲದೇ ಪ್ರವೇಶವಿಲ್ಲದ ನಿಷೇಧಿತ ಪ್ರದೇಶದಲ್ಲಿ ಇದ್ದೀರಿ. ಏಳ್ರಿ ಬೇಗ ಮತ್ತು ಇಲ್ಲಿಂದ ಹೊರಟು ಹೋಗಿ. ಇಲ್ಲಾಂದ್ರೆ.........

ಪ್ರೊ : ಮೀರಾ, ಸ್ವಲ್ಪ ತಡಿ. ಯಾರು ಅನ್ನೋದು ತಿಳಿಲಿ. ನೋಡಿದರ ನೋಡೋಣ.

ಭಿಕ್ಕು : ಭಿಕ್ಕಿಮಿಕ್ಕಿ, ಮತ್ತು ಟುಕ್, ಟುಕ್ ಭಯ್ಯಾ ತಾಲಮ್ ತಾಲ್.

ಪ್ರೊ : ಒಂದು ಹುಡುಗಿ ಮತ್ತು ...........

ಟುಕ್, ಟುಕ್ : ಒಬ್ಬ ಇಂಜಿನ್ ಡ್ರೈವರ್

ಪ್ರೊ. : ಏನು? ಇಂಜಿನ್ ಡ್ರೈವರ್....... ಒಳ್ಳೆಯದೇ ಆಯಿತು. ನಿಮಗ ಈ ಮಿಶೀನ್ ಗಿಶೀನ್ ಜ್ಞಾನ ಅದ ಅದಂಗ ಅಯ್ತು.

ಟುಕ್, ಟುಕ್ : ಯಾಕ ಇರಲಿಕ್ಕೆ ಸಾಧ್ಯ ಇಲ್ಲ ? ಒಂದಾನೊಂದು ಕಾಲಕ್ಕ ಇಡೀ ದೇಶದಾಗ, ನನ್ನಂಥ ಇಂಜಿನ್ ಡ್ರೈವರ್ ಯಾರೂ ಇರಲಿಲ್ಲ.

ಪ್ರೊ : ಇರಬಹುದು. ಇರಬಹುದು. ಆದರೆ ಈಗ ನಮ್ಮ ಹತ್ತಿರ ನೀನು ಡ್ರೈವ್ ಮಾಡು ಅಂಥ, ರೈಲು ಇಂಜಿನ್ ಇಲ್ಲ. ಆದಕ್ಕಿಂತ ದೊಡ್ಡ ಇಂಜಿನ್ ಅದ. ಆದೇ ನೀನು ಎಂದಾದರೂ ರಾಕೆಟ್ ನಡಿಸಿ ಏನು? (ಮೀರಾ ಹಿಂದಿನಿಂದ ಸನ್ನೆ ಮಾಡುತ್ತಾಳೆ).

ಭಿಕ್ಕು : ಅರೆ, ಅಲ್ಲಿ ಹಿಂದಿನಿಂದ ಈಕಿ, ಹಾಂ, ಹೂಂ ಅಂತ ಯಾಕ ಮಾಡ್ತ ಇದ್ದಾಳ ?

ಪ್ರೊ : ಮೀರಾ, ಈ ವಿಷಯದಾಗ ನೀ ತಲಿ ಹಾಕಬ್ಯಾಡ.

ಟುಕ್, ಟುಕ್ : ರಾಕೆಟ್ ? ಎಲ್ಲಿ ಹಾರಿಸಬೇಕು ರಾಕೆಟ್ಟನ್ನು ?

ಪ್ರೊ : ಒಂದು ಸಲ ಹಾರಿದರೆ ಸಾಕು. ಈ ರಾಕೆಟ್ ಸೀದಾ ಚಂದ್ರನನ್ನು ತಲುಪುತ್ತದೆ. ನಿನಗೆ ಗೊತ್ತಾ? ಗೊತ್ತಿಲ್ಲದ ಏನು? ಒಂದು ಸಲ ಇದರ ಒಳಗೆ ಹೊಕ್ಕು, ನೋಡೋಣ.

ಮೀರಾ : (ಟುಕ್ ಟುಕ್‌ನಿಗೆ) ಬಹುಶಃ ನಿನಗೆ ಆದರ ಒಳಗೆ ಹೋಗಲಿಕ್ಕೆ ಆಗಲಿಕ್ಕಿಲ್ಲ.

ಟುಕ್, ಟುಕ್ : ಯಾಕ ಸಾಧ್ಯ ಇಲ್ಲ? ಬೇಕಾದ್ರೆ ಹೋಗಿ ತೋರಸ್ತೀನಿ (ಒಳಗೆ ಹೋಗುತ್ತ) ಭಿಕ್ಕು ನೀ ನನ್ನ ಜೊತೆ ಬಾರಲ್ಲ

ಮೀರಾ : ಆ ಹುಡುಗಿ ಬ್ಯಾಡ. ಇದು ಮಕ್ಕಳ ಸಲುವಾಗಿ ಅಲ್ಲ.

ಪ್ರೊ : ಏನೂ ಪರವಾಗಿಲ್ಲ. ನೀನೂ ಹೋಗು ಬೇಕಾದರೆ. ಒಬ್ಬರಿಗಿಂತ ಇಬ್ಬರು ಲೇಸು (ಭಿಕ್ಕು ಒಳಗೆ ಹೋಗುವಳು) ನಡಿ ಒಂದು ಕೆಲಸ ಆಯ್ತು. ಈಗ ಇದಕ್ಕ ಟಾಪ್ ಹಾಕಿ ಇಟ್ರೆ ಸಾಕು. (ರಾಕೆಟ್‌ನ ಭಾಗ ಬಿಬಿ ಜೋಡಿಸುತ್ತಾರೆ. ಅವರ ಎದೆ ಮಾತ್ರ ಕಾಣಿಸುತ್ತವೆ.)

ಮೀರಾ : (ಪ್ರೊಫೆಸರಿಗೆ) ಏನು ಮಾಡ್ತಾ ಇದ್ದೀರಿ ಪ್ರೊಫೆಸರ್ ?

ಪ್ರೊ : (ಭಿಕ್ಕು ಮತ್ತು ಭಯ್ಯಾನಿಗೆ) ಏನ್ರಿ, ನೀವು ಹೀಗೆ ಹಾರುವದರಿಂದ ಏನಾದರೂ ತೊಂದರೆ ಇದೆಯಾ?

ಟುಕ್ ಟುಕ್ : ತೊಂದ್ರೆ? ಇದರಲ್ಲೇನು ಬಂತು? ಚಂದ್ರನನ್ನು ತಲುಪಿ ವಾಪಸ್ಸು ಬರುವದರಲ್ಲಿ ಬಹಳ ಖುಶಿ ಇದೆ.

ಭಿಕ್ಕು : ಹೌದು, ಭಾರಿ ಖುಶಿ. ವಾಪಸ್ ಬಂದು ಪುನಃ ನಮ್ಮ ಇಂಜನ್ನ ಹುಡುಕುವ ಕೆಲಸ ಮಾಡೋಣ. ಅಲ್ಲದೇ ಮ್ಯಾಲೆ ಹೋದಾಗ ನಮ್ಮ ಇಂಜನ್ನಿನ ಭಾಗಗಳು, ಎಲ್ಲೆಲ್ಲಿ ಇದೆ ಎಂದು ಸುಲಭವಾಗಿ ಕಂಡು ಹಿಡಿಯುವ ಅವಕಾಶನೂ ಇದರಲ್ಲಿ ಇದೆ.

ಮೀರಾ : (ಚಿಂತೆಯಿಂದ) ನೀವು ಈ ಭೂಮಿ ಮ್ಯಾಲೆ ಮತ್ತೆ ಹಿಂದಿರುಗಿ ಬರಲು ಸಾಧ್ಯ ಇಲ್ಲ.

ಪ್ರೊ : ಈಗ ಈ ಕಾರ್ಯಕ್ರಮದ ಬಗ್ಗೆ ಹಿಂದೇಟು ಹಾಕುವುದಾಗಲೀ, ಇವರು ವಾಪಸ್ ಬರುವ ಬಗ್ಗೆಯಾಗಲೀ ಚರ್ಚೆ ಮಾಡುವ ಪ್ರಶ್ನೆಯೇ ಇಲ್ಲ. ಯಾಕೆಂದರೆ ಈ ಇಬ್ಬರೂ ವೀರ ಯಾತ್ರಿಕರು. ಹೊರಗಡೆ ಬರಲು ತಯಾರಿಲ್ಲ. ಹೌದಲ್ಲ? ನಡೀ, ಈ ಇದರ 3ನೆಯ ಹಾಗೂ ಕೊನೆಯ ಭಾಗ ಜೋಡಿಸೋಣ. (ಅದನ್ನು ಈಗ ಇಟ್ಟಿದ್ದರ ಮೇಲೆ ಇಡುತ್ತಾರೆ. ಭಯ್ಯಾ ಮತ್ತು ಭಿಕ್ಕುವಿನ ತಲೆಗಳು ಮಾತ್ರ ಕಾಣುತ್ತವೆ.)

ಪ್ರೊ : ಇದರ ಮೇಲಿನ ಮುಚ್ಚುವ ಭಾಗ ಎಲ್ಲಿ? ಟಿಕ್ಕು, ಚಿಕ್ಕು

ಮೀರಾ : (ಮೆಲ್ಲನೆ) ನೀವು ನಿಜವಾಗಿಯೂ ಭೂಮಿಗೆ ಹಿಂದಿರುಗಿ ಬರಲು ಸಾಧ್ಯವೇ ಇಲ್ಲ. (ಟಿಕ್ಕು, ಚಿಕ್ಕು, ಮುಚ್ಚಳ ತರುತ್ತಾರೆ)

ಟಿಕ್ಕು ಚಿಕ್ಕು : ತೆಗೆದುಕೊಳ್ಳಿ ಸರ್

ಪ್ರೊ : ಹೂ, ಬೇಗ ಹಾಕಿ ಬಿಗಿ ಮಾಡಿ. ಬೇಗ (ಹಾಕುತ್ತಾರೆ. ಇಡೀ ಆಕೃತಿ ರಾಕೆಟ್‌ನ ಹಾಗೆ ಕಾಣುತ್ತದೆ. ಭಯ್ಯಾ, ಭಿಕ್ಕು ಕಾಣಿಸುವುದಿಲ್ಲ) ಚಲೋ, ರಾಕೆಟ್ ರೆಡಿ. ಈಗ ಉಡಾಯಿಸಿ ಬಿಡೋಣ.

ಟುಕ್, ಟುಕ್ : (ಮುಚ್ಚಳ ತೆಗೆದು) ಪ್ರೊಫೆಸರ್ ಸಾಹೇಬರೆ, ಒಳಗ ಭಯಂಕರ ಕತ್ತಲೆ ಇದೆ. (ಪ್ರೊ. ಮುಚ್ಚಳವನ್ನು ಒತ್ತಿ)

ಪ್ರೊ : ಗದ್ದಲ ಮಾಡಬ್ಯಾಡ್ರಿ (ನಿಯಂತ್ರಣ ಮೇಜಿಗೆ ಹೋಗುತ್ತಾರೆ. ಮೀರಾ ರಾಕೆಟ್ ಮೇಲೆ ೨, ೩ ಸಾರಿ ಬಾರಿಸುತ್ತಾರೆ. ಭಿಕ್ಕು ಮುಚ್ಚಳ ತೆಗೆದು ತಲೆ ಎತ್ತಿ)

ಭಿಕ್ಕು : ನೀವೂ ಒಳಗ ಬರತೀರೇನು?

ಮೀರಾ : ತಡಮಾಡಬ್ಯಾಡ್ರಿ, ಬೇಗ ಹೊರಗೆ ಬನ್ನಿ. ಈ ಸುಡುಗಾಡು ರಾಕೆಟ್ಟಿಗೆ ಬರೇ ಅಲ್ಲಿಯವರೆಗೆ ತಲುಪುವ ಶಕ್ತಿ ಮಾತ್ರ ಇದೆ.

ಭಿಕ್ಕು : ಇರಲಿ, ಏನಾಯಿತು?

ಮೀರಾ : ಅದು ವಾಪಸ್ ಬರಲಿಕ್ಕೆ ಸಾಧ್ಯವೇ ಇಲ್ಲ.

ಪ್ರೊ : ಏ, ಏನದು ಗಡಬಡ (ಓಡಿಬಂದು ಮುಚ್ಚಳ ಒತ್ತಿ) ಈ ಗುಸುಗುಸು ಸಾಕು. ಎಣಿಕೆ ಶುರುಮಾಡು.

ಟುಕ್, ಟುಕ್ : (ಒಳಗಿನಿಂದ) ನಮ್ಮನ್ನ ಹೊರಗ ತೆಗಿರಿ

ಪ್ರೊ : ಈಗ ಅದೆಲ್ಲ ಶಕ್ಯ ಇಲ್ಲ. ಉಡ್ಡಯನದ ಯಾಂತ್ರಿಕ ವ್ಯವಸ್ಥೆ ಪೂರ್ತಿ ಆಗದ. ಸೈಲೆನ್ಸ್, ಕೌಂಟ್ ಡೌನ್, ಸ್ಟಾರ್ಟ್
೬, ೫, ೪, ೩, ೨

ಭಿಕ್ಕು : ೪, ೫, ೬, ೭, ೮

ಪ್ರೊ : ೯, ೧೦, ೧೧ ಥೂ, ಥೂ, ಹಿಂಗ್ಯಾಕ ಆಗ್ತಾ ಇದೆ, ರಾಕೆಟ್‌ನ ಎಣಿಕೆ ಇಳಿಬೇಕು. ಮತ್ತೆ ಶುರು ೫, ೪, ೩, ೨,.........

ಮೀರಾ : ೩, ೪, ೫, ೬

ಪ್ರೊ : ಮೀರಾ ಇಳಿಕೆ ಕ್ರಮದಾಗ ಅನ್ನು

ಮೀರಾ : ಇಳಿಕೆ ಕ್ರಮದಾಗ ಅನ್ನಬೇಕು ಅಂತೀರಿ ಸರ್, ೯೯, ೯೮, ೯೭, ೯೬, ಜಲ್ದಿ ಓಡಿ ಹೋಗ್ರಿ.......... ೯೫

ಪ್ರೊ : ನೀ ಅಲ್ಲಿಂದ ಶುರು ಮಾಡಿದರೆ ೦ ಬರುವಷ್ಟರಲ್ಲಿ ನಮ್ಮ ಆಯುಷ್ಯ ಮುಗೀತದ. ನಮ್ಮಲ್ಲಿ ಬಹಳ ಸುಧಾರಣೆ ಪ್ರಗತಿ ಆದ. ಅದಕ್ಕೆ ೧೦ರಿಂದ ಸಾಕು.

ಮೀರಾ : ಅಷ್ಟು ಜಲ್ದಿ ಯಾಕೆ ಸರ್? ೯೪, ೯೩, ೯೨, ೯೧........,

ಟುಕ್, ಟುಕ್ : (ಮುಚ್ಚಳ ತೆಗೆದು) ನಾವು ಹೊರಗೆ ಬರತೀವಿ

ಮೀರಾ : ಪ್ರೊಫೆಸರ್ ಸರ್, ಇವರು ಹೊರಗೆ ಬರುತ್ತಾರಂತೆ.

ಪ್ರೊ : ಈಗ ಸಾಧ್ಯ ಇಲ್ಲ. ವಿಜ್ಞಾನದ ಪ್ರಗತಿಗೆ ಈ ಇಬ್ಬರನ್ನು ಬಲಿಪಶು ಮಾಡುತ್ತಿರುವದಕ್ಕಾಗಿ ನಾನು ಬಹಳ ವಿಷಾದಿಸುತ್ತಿದ್ದೇನೆ. ವಿಧಿ ಇಲ್ಲ, ಶುರು............

ಮೀರಾ : ೧೯೯, ೧೯೮, ೧೯೭, ೧೯೬

ಪ್ರೊ : ಮೀರಾ ಯಾಕೆ? ನಿನ್ನ ತಲಿ ಸರಿ ಅದನ ಇಲ್ಲ? ನೀ ಸ್ವಲ್ಪ ಸುಮ್ಮನೆ ಕೂಡು, ನಾನೇ ಕೌಂಟ್ ಮಾಡತೀನಿ. ಕೌಂಟ್ ಡೌನ್ ಸ್ಟಾರ್ (ನಿಯಂತ್ರಣ ಮೇಜಿಗೆ ಹೋಗಿ) ೫, ೪, ೩, ೨

ಟುಕ್, ಟುಕ್ : (ಹೊರಗೆ ಇಣುಕಿ) ಇದರ ಒಳಗಿನ ಒಂದು ಮೊಳೆ, ಸಡಿಲ ಆಗೆದ

ಪ್ರೊ : ಏ ಸುಮ್ಮನೆ ಕೊಡು, ನಿನ್ನ ತಲ್ಯಾಗಿನ ಸ್ಕ್ರೂ ಸಡಲ ಮಾಡತೀನಿ, ಸುಮ್ಮನೆ ಆ ಮುಚ್ಚಳ ಹಾಕಿಕೊ

ಟುಕ್ ಟುಕ್ : ನಿಮ್ಮಿಷ್ಟ ಸಾಹೇಬರೆ, ಈ ರೀತಿ ಸಡಿಲವಾಗಿ ಇರುವಾಗ ಹಾರಿಸಿದರೆ, ಈ ಸುಡುಗಾಡು ರಾಕೆಟ್ ಇಲ್ಲೇ ಮುರ್ದು ಬೀಳತದ.

ಪ್ರೊ : ಸುಡುಗಾಡು? ಮೂರ್ಖ, ಇದು ಸರ್ವಶ್ರೇಷ್ಠ ರಾಕೆಟ್. ಯಾಕಂದ್ರೆ ಇದನ್ನ ತಯಾರು ಮಾಡಿದ್ದು ನಾನು.

ಟುಕ್, ಟುಕ್ : ನೀವೊಬ್ಬರೆ ?

ಮೀರಾ : ಇಲ್ಲ, ಇದರ ಮೂರೂ ಭಾಗ ಅಲ್ಲಿ, ಇಲ್ಲಿ ಬಿದ್ದಿದ್ದವು. ಮತ್ತೆ ಇದರ ಮೇಲಿನ ಮುಚ್ಚಳ ಮಾತ್ರ ಟಿಕ್ಕು, ಚಿಕ್ಕು ತಯಾರು ಮಾಡ್ಯಾರ. ಇವರು ಅಲ್ಲಿಷ್ಟು, ಇಲ್ಲಿಷ್ಟು ವೈರಿಂಗ್ ಮಾಡಿ, ಆ ಕಂಟ್ರೋಲ್ ಬೋರ್ಡ್ ಮಾಡ್ಯಾರ. ನಮಗ ಇದು ಹಾರಬಹುದು ಅಂತ ಖಾತರಿ ಇಲ್ಲ.

ಪ್ರೊ : ಮೀರಾ ನೀನು ನನಗ ಅಪಮಾನ ಮಾಡ್ತಾ ಇದ್ದಿ.

ಟುಕ್, ಟುಕ್ : ಹೋಗ್ಲಿಬಿಡ್ರಿ, ಇದರ ಸ್ಕ್ರೂ ಸಡಲ ಅದ. ಸ್ವಲ್ಪ ಸ್ಕ್ರೂ ಡ್ರೈವರ್ ಇದ್ದರೆ ಒಳ್ಳೆಯದಿತ್ತು.

ಪ್ರೊ : ತಗೋ, ಈ ಸ್ಕ್ರೂ ಡ್ರೈವರ್. ಜಲ್ದಿ ಬಿಗಿ ಮಾಡು.

ಟುಕ್, ಟುಕ್ : ಇದೇನ್ರಿ, ಇದಕ ಜಂಗ್ ಹತ್ತಿದ (ತುಕ್ಕು ಹಿಡಿದಿದೆ)

ಪ್ರೊ : ಯಾವದೇ ಒಂದು, ನೀ ಬಿಗಿ ಮಾಡು, ನಾ ಕೌಂಟ್ ಡೌನ್ ಸ್ಟಾರ್ಟ್ ಮಾಡತೀನಿ, ಸೈಲೆನ್ಸ್..... ೧೦, ೯, ೮, ೭, ೬, ೫ (ಇಷ್ಟರಲ್ಲಿ ಮೀರಾ, ಭಿಕ್ಕು, ಭಯ್ಯಾ ಸೇರಿ ಇಡೀ ರಾಕೆಟ್ಟನ್ನು ಬಿಚ್ಚಿ ಇಟ್ಟಿರುತ್ತಾರೆ. ಪ್ರೊ. ನಿಯಂತ್ರಣ ಮೇಜಿನ ಹತ್ತಿರ ಓಡಿ) ೪, ೩, ೨, ೧...

ಭಿಕ್ಕು, ಮೀರಾ, ಟುಕ್, ಟುಕ್ : ೦

ಪ್ರೊ : (ಪ್ರೇಕ್ಷಕರಿಗೆ) ನೋಡಿದಿರಾ? ನಾನು ನನ್ನ ಮೊದಲ ರಾಕೆಟ್ಟನ್ನು ಹೀಗೆ ಯಶಸ್ವಿಯಾಗಿ ಹಾರಿಸಿದೆ. ಇಂಥ ಮಹತ್ಕಾರ್ಯವನ್ನು ಈ ಹಿಂದೆ ಯಾರೂ ಮಾಡಿಲ್ಲ, ಇನ್ನು ಮುಂದೆಯೂ ಮಾಡಲಾರರು. (ಹಿಂದಿರುಗಿ ನೋಡುತ್ತಾನ, ಸಿಟ್ಟಿನಿಂದ ನಡುವೆ ಇದ್ದ ತಂತಿ ಎಡವಿ ಬೀಳುತ್ತಾನೆ. ಎದ್ದು ಮೈ, ಕೈ ಕೊಡವುತ್ತ) ಅಂದ್ರೆ ಇದು ಹಾರಲೇ ಇಲ್ಲ.

ಮೀರಾ : ಇವು ತಮ್ಮಷ್ಟಕ್ಕೆ ತಾನೇ, ಬೇರೆ ಬೇರೆಯಾಗಿ ಬಿದ್ದಿವೆ.

ಭಿಕ್ಕು : ಗಾಬರಿಗೆ ಕಾರಣ ಇಲ್ಲ ಸರ್, ನಮಗೆ ಏನೂ ಆಗಿಲ್ಲ, ನಾವು ಸುರಕ್ಷಿತವಾಗಿ ಇದ್ದೇವೆ.

ಪ್ರೊ : ಅಯ್ಯೋ ನನ್ನ ರಾಕೆಟ್ (ಮಕ್ಕಳಂತೆ ಅಳುತ್ತಾನೆ.)

ಟುಕ್, ಟುಕ್ : ಇವರಿಗೆ ನಾ ಹಾಳಾದ್ರ ಚಿಂತಿ ಇಲ್ಲ. ಆದರ ನನಗೆ ಈಪ್ರಾಣಿ ಮೇಲೆ ದಯಾ

ಮೂಡುತ್ತಿದೆ.

ಮೀರಾ : ಇವರು ಕಾಲಿನಿಂದ ತಲೆಯವರೆಗೆ ಪೂರ್ಣ ಸಂಶೋಧಕರು.

ಭಿಕ್ಕು : ವ್ಯರ್ಥ ಸಂಶೋಧಕರು

ಪ್ರೊ : (ವ್ಯರ್ಥ, ವ್ಯರ್ಥ ಎಂದು ಉಸಿರುಗರೆಯುವನು.)

ಟುಕ್, ಟುಕ್ ನಿರಾಶಾಗಬ್ಯಾಡ್ರಿ ಪ್ರೊಫೆಸರ್, ಎಲ್ಲಾ ಸರಿ ಆಗ್ತದ. ನಿಮಗ ಗೊತ್ತಿರಬೇಕು. ರಾಕೆಟ್‌ಗಿಂತ ಮೊದಲು ಜಗತ್ತಿನ್ಯಾಗ ತಯಾರ ಆಗಿದ್ದು ರೈಲಿನ ಇಂಜನ್. ಅದಕ್ಕ ನೀವು ಮೊದಲು ಒಂದು ರೈಲಿನ ಇಂಜನ್ ಮಾಡ್ರಿ, ಅನುಭವ ಆಗ್ತದ.

ಪ್ರೊ : ರೈಲು ಇಂಜನ್ನ ?

ಭಿಕ್ಕು : ಹಾಂ, ನಮ್ಮ ಇಂಜನ್

ಪ್ರೊ : ನಿಮ್ಮ ಇಂಜನ್ನ ?

ಟುಕ್, ಟುಕ್ (ಹಿಂಭಾಗದಲ್ಲಿರುವ ಇಂಜನ್ನಿನ ಹತ್ತಿರ ಕರೆದುಕೊಂಡು ಹೋಗಿ) ಇದನ್ನ ನೋಡ್ರಿ, ದಿಟ್ಟಿಸಿ ನೋಡ್ರಿ, (ಪ್ರೊ. ಅದನ್ನು ನೋಡುತ್ತಾನೆ ಮುಟ್ಟುತ್ತಾನೆ. ಅಳೆಯುತ್ತಾನೆ. ಇ)

ಪ್ರೊ : ದೊಡ್ಡದು..... ಭಾರಿ ದೊಡ್ಡದು.......... ಆದರೆ ಇದಕ್ಕೆ ಏನೋ ಕಡಿಮೆ ಇದೆ.......... ಹೌದಾ?

ಟುಕ್, ಟುಕ್ ಕರೆಕ್ಟ್ ಸಾಹೇಬರೆ

ಪ್ರೊ : ಸ್ವಲ್ಪ ಇರಿ, (ತಾನೇ ಹೋಗಿ ರಾಕೆಟ್‌ನ ಒಂದು ಭಾಗ ತಂದು ಜೋಡಿಸಿ) ಈಗ ನೋಡು

ಭಿಕ್ಕು : ಇದು ಎಷ್ಟು ಕರೆಕ್ಟ್ ಆಗಿ ಕೂತಿದೆ. ಅಂದರೆ ಇನ್ನೊಂದು ಬದಿಗೂ ಸರಿಹೋಗ್ತದ ಅನ್ನಕೊಳ್ಳತೀನಿ.

ಪ್ರೊ : ನೀ ಸ್ವಲ್ಪ ಸುಮ್ಮನೆ ಇರು......... ನಾ ಅದನ್ನ ಮಾಡಲಿಕ್ಕೆ ಶುರು ಮಾಡೀನಿ. (ಉಳಿದ ಎರಡೂ ಭಾಗಗಳನ್ನು ಇಂಜನ್ನಿಗೆ ಜೋಡಿಸಿ) ಈಗ ಹೇಳು..... ಏನಂತಿ?

ಮೀರಾ : ನಿಮ್ಮಂಥ ಸರ್ವಶ್ರೇಷ್ಠ ಸಂಶೋಧಕರು ಹಿಂದಕ್ಕೆ ಎಲ್ಲಿ ಇದ್ದಿಲ್ಲ, ಈಗಲೂ ಎಲ್ಲಿ ಇಲ್ಲ, ಇನ್ನು ಮುಂದೆನೋ ಎಲ್ಲಿ ಹುಡುಕಿದರೆ ಸಿಗಲಿಕ್ಕೆ ಸಾಧ್ಯವಿಲ್ಲ.

ಪ್ರೊ : ಇವತ್ತಿನಿಂದ ನಾನು ಬರೀ ರೈಲಿನ ಇಂಜನ್‌ಗಳನ್ನೇ ತಯಾರು ಮಾಡುತ್ತೇನೆ.

ಟುಕ್, ಟುಕ್ (ಖಡ, ಖಡ, ಕಡಲ್ ಎಂದು ಇಂಜನ್ನ ಧ್ವನಿ ಹೊರಡಿಸುತ್ತದೆ.) ಶಹಭಾಸ್

ಟಿಕ್ಕು, ಚಿಕ್ಕು : (ಓಡುತ್ತ ಬಂದು) ಏನಾಯಿತು, ಏನಾಯಿತು?

ಟಿಕ್ಕು : ರಾಕೆಟ್ ಹಾರಿತಾ?

ಮೀರಾ : ಇದು ಸ್ಟಾರ್ಟ್ ಆಯಿತು.

ಟಿಕ್ಕು : ವಾಹ ! ಬಹಳ ಚಲೋ ಅದ.

ಚಿಕ್ಕು : ಭಾರೀ ಚಲೋ ಅದ.

ಭಿಕ್ಕು : ನಡೀರಿ ಈಗ ಉಳಿದ ಭಾಗಗಳನ್ನು ಹುಡುಕೋಣ.

(ರೈಲು ಗಾಡಿ ಹಾಡು ಹಾಡುತ್ತ ಹೋಗುವರು.)

## ದೃಶ್ಯ ೬

(ತೆರೆಯಿಂದ ಧ್ವನಿಗಳು)

ಭಿಕ್ಕು : ಭಯ್ಯಾ ಏನಾರ ಸಿಕ್ಕಿತಾ?

ಟುಕ್, ಟುಕ್ : ತಡಿ, ಇಲ್ಲೇನೋ ಇರೋ ಹಾಗಿದೆ. ಉಹುಂ, ಏನೂ ಇಲ್ಲ, ನಿನಗೇನಾದರೂ ಸಿಕ್ಕಿತೇನು?

ಭಿಕ್ಕು : ಇಲ್ಲ, ಏನೂ ಇಲ್ಲ (ಪರದೆಯ ಹಿಂದಿನಿಂದ ಗಾಡಿಯ ಹಾಡು, ಅದರ ಜೊತೆಗೆ ಸೈನಿಕರಿಗೆ ಆದೇಶ ನೀಡುವ ಶೈಲಿಯಲ್ಲಿ, ಮುನ್ನುಗ್ಗಿ, ಬಲಕ್ಕೆ ತಿರುಗಿ, ಹಿಂದೆ ತಿರುಗಿ, ಮುಂದೆ ನೋಡಿ, ಇತ್ಯಾದಿ. ಎರಡು ಹುಡುಗರು ಕೈಯಲ್ಲಿ ಬಂದೂಕು ಹಿಡಿದು ಲೆಫ್ಟ್, ರೈಟ ಎನ್ನುತ್ತ ರಂಗದ ಮೇಲೆ ಬರುತ್ತಾರೆ. ತಲೆಯ ಮೇಲೆ ಹೆಲ್ಮೆಟ್ ಇದೆ. ಭಿಕ್ಕು ಮತ್ತು ಭಯ್ಯಾ ತಮ್ಮ ಇಂಜನ್ನಿನ ಮೇಲೆ ಕುಳಿತು ನೋಡುತ್ತಿದ್ದಾರೆ.)

ಹುಡುಗ –೧ : ಸಾವಧಾನ್

ಹುಡುಗ –೨ : ಬಂದೂಕ ಎತ್ತು

ಹುಡುಗ –೧ : ಎಡಕ್ಕೆ ನೋಡು

ಹುಡುಗ –೨ : ಮುಂದೆನಡೆ, ಒಂದು, ಎರಡು, ಒಂದು ಎರಡು, ಒಂದು....... ಎರಡು

(ಎರಡೂ ಹುಡುಗರು ಶಿಸ್ತಿನಿಂದ ಹೆಜ್ಜೆ ಹಾಕುತ್ತಾರೆ. ಭಿಕ್ಕು ಅವರಂತೆ ನಕಲು ಮಾಡುತ್ತಾಳೆ.)

ಭಿಕ್ಕು : ಏನು ಆಟನೋ ಇದು

ಹು –೧ : ಅಹಾ ನಮ್ಮ ಶತೃ ಬಂದ

ಹು –೨ : ಯುದ್ಧ ಶುರು, ಆಕ್ರಮಣ ಮಾಡ್ರಿ

(ಇಬ್ಬರೂ ಇಂಜಿನ್ ಕಡೆ ಓಡುತ್ತಾರೆ.)

ಟುಕ್, ಟುಕ್ : ರುಕ್‌ಜಾವ್ (ಇಬ್ಬರೂ ನಿಲ್ಲುತ್ತಾರೆ) ಏನಿದು ಹುಚ್ಚಾಟ, ನಿಮ್ಮ ತಲಿ ಸರಿ ಅದನೋ ಇಲ್ಲೋ?

ಹು –೧ : ನಮ್ಮ ಶತೃ ಶರಣಾಗತರಾಗ್ತಾ ಇಲ್ಲ.

ಹು –೨ : ನೀವೀಗ ನಮ್ಮ ಸೆರೆಯಲ್ಲಿ ಇದ್ದೀರಿ.

ಭಿಕ್ಕು : ಹಟಜ್, ನಮ್ಮ ಹತ್ತಿರ ಈ ಇಂಜಿನ್ ಇದೆ. ಬೇಕಾದರೆ ಈ ರೈಲಿನ ಆಟ ಆಡ್ರಿ.

ಹು –೧ : ರೈಲಿನಾಟ? ಅದು ಸಣ್ಣ ಹುಡುಗರು ಆಡೋ ಆಟ. ಅಸಲ್ ಗಂಡಸರು ಅಂದ್ರೆ ಸೈನಿಕರು, ಸೈನಿಕರ ಆಟ ಆಡಬೇಕು. ಸಾವಧಾನ, ನಡೆ ಮುಂದೆ, ಬಂದೂಕು ಹಿಡಿ, ಎಡಾ, ಬಲಾ, ಎಡಾ, ಬಲಾ, ಎಡಾ, ಬಲಾ (ಪುನಃ ಕವಾಯಿತು ಪ್ರಾರಂಭಿಸುತ್ತಾರೆ.)

ಟುಕ್, ಟುಕ್ : ಬಲಕ್ಕೆ ತಿರುಗು ! ಮುಂದ ನಡಿ
ಎಡಕ್ಕೆ ತಿರುಗು – ಬಲಕ್ಕೆ ತಿರುಗು,
ಒಂದು ಸುತ್ತು ಹಾಕಿ – ಎರಡನೆಯ ಸುತ್ತು ..... ಓಡಿಹೋಗು........
(ಎರಡೂ ಹುಡುಗರು ರಂಗಸ್ಥಳದ ಮೇಲೆ ಓಡಾಡಿ ಸುಸ್ತಾಗಿ ಬೀಳುತಾರು).

ಹು –೧ : ಅಯ್ಯಯ್ಯಪ್ಪ, ಏನು ಪೈರಾಣ ಅಯ್ತು ನಮಗ, ನೀವು ಬಲಕ್ಕೆ ತಿರುಗು, ಎಡಕ್ಕೆ ತಿರುಗು, ಅದೂ ಇದು ಎಲ್ಲಾ ಅಂದ್ರಿ. ಆದರೆ ಹಿಂದಿರುಗಿ ಬಾ ಅಂತ ಯಾಕೆ ಅನ್ನಲಿಲ್ಲ?

ಟುಕ್, ಟುಕ್ : ನೀವು ನಿಮ್ಮಿಷ್ಟಕ್ಕೆ ತಿರುಗಬಹುದು ಅಂದುಕೊಂಡೆ.

ಹು – ೨ : ಆರ್ಡರ್ ಇಲ್ಲದೆ ಹ್ಯಾಂಗ ತಿರಗಲಿಕ್ಕೆ ಸಾಧ್ಯ?

ಹು –೨ : ಸಿಪಾಯಿಗಳು ಅಂದರೆ ಬರೇ ಆದೇಶ ಪಾಲನಾ ಮಾಡುತವರು.

ಟುಕ್, ಟುಕ್ : ಅಂದರೆ, ನೀವು ಬರೀ ಬೇರೆಯವರ ಆದೇಶದ ಪಾಲನೆ ಮಾಡುತವರು?

ಹು. – ೨ : ಕರೆಕ್ಟ್

ಭಿಕ್ಕು : (ಅನುಕರಣೆ ಮಾಡುತ್ತ) ಸಾವಧಾನ, ವಿಶ್ರಾಮ, ಆಗೆ ಬಢೋ, ದೈನೆ ಮೂಡ್, ಹ, ಹ, ಹ ! ಇದು ಒಂದು ಆಟ ಏನು? ಬರೀ ಹೇರುವುದು, ಬೇರೆ ಜನಗಳ ಮೇಲೆ ಹೇರುವ ವ್ಯಕ್ತಿ ದೊಡ್ಡ ವ್ಯಕ್ತಿ ಆಗಲಾರ.

ಹು : ನಾವು ಖರೇ, ಖರೇ ಸೈನಿಕರು. ಗುಂಡು ಹಾರಿಸ್ತೇವಿ, ಢಂ, ಢಂ,

ಭಿಕ್ಕು : ಢಂ, ಢಂ, ಅಂತ ದೀಪಾವಳಿ ಕಾಲಕ ಬಾಣ ಬಿರುಸು, ಸಹ ಹಾರತಾವ.

ಟುಕ್, ಟುಕ್ : ಅಂದ್ರೆ ಈ ಬಂದೂಕಿನಿಂದ ಜನರನ್ನು ಕೊಲ್ಲತೀರಿ.

ಹು. – ೨ : ಹೌದು, ಒಂದು ವೇಳೆ ಯುದ್ಧವಾದರೆ ?

ಟುಕ್, ಟುಕ್ : ಒಂದು ವೇಳೆ ಸಿಪಾಯಿಗಳು ಇರಲಿಲ್ಲಾಂದ್ರ ಯುದ್ಧ ಆಗೋದೆ ಇಲ್ಲ. ಯುದ್ಧ ಇಲ್ಲ ಅಂದರೆ ಜನ ಸಾಯೋದೆ ಇಲ್ಲ.

ಭಿಕ್ಕು : ಆಗ ಎಲ್ಲರೂ ನಮ್ಮ ಈ ರೈಲಿನಲ್ಲಿ ಕುಳಿತು ಸಂತೋಷದಿಂದ ಊರೂರು ಹೋಗ್ತಾರ
(ಒಂದು ಹೆಲ್ಮೆಟ್ ತೆಗೆದು ಹಾಕಿಕೊಳ್ಳುತ್ತಾಳೆ.)

ಟುಕ್, ಟುಕ್ : (ಇನ್ನೊಂದು ಹೆಲ್ಮೆಟ್ ತೆಗೆಯುತ್ತಾ) ಅರೆ, ಇದು ನಮ್ಮ ಇಂಜಿನ್ನಿನದೇ ಇದೆಯಲ್ಲ !

ಭಿಕ್ಕು : ಇದೂನು ಸಹ ಅದೇ ಆಗಬೇಕು.
(ಇಂಜಿನ್ನಿಗ ಸೇರಿಸುತ್ತಾರೆ. ಹುಡುಗರು ಸಹಾಯ ಮಾಡುತ್ತಾರೆ.

ಹು. –೧ : ವಾಹ್, ಬರಾಬ್ಬರಿ ಕೂಡಿದ.

ಹು. – ೨ : ಈ ಇಂಜಿನ್ನ ಸಲುವಾಗಿಯೇ ಇವು ತಯಾರಾಗಿರಬೇಕು.

ಭಿಕ್ಕು : ತಯಾರ ಮಾಡಿದ್ದಲ್ಲ, ಇದು ಈ ಇಂಜಿನ್ನಿನ ಭಾಗ.

ಟುಕ್, ಟುಕ್ : ಇದು ನಿಮಗ ಎಲ್ಲಿ ಸಿಕ್ಕಿತು ?

ಹು. –೧ : ಅಲ್ಲೆ ಆ ಗೋಪನ್‌ಲಾಲನ ಗೋದಾಮಿನೊಳಗೆ. ಅಲ್ಲಿ ಇಂಥಾ ಕಚಡಾ ಸಾಮಾನು ಬಹಳ ಅವ.

ಹು. ೨ : ಕಚ್ಚಿಣ ಮತ್ತು ಉಳಿದ ಸಾಮಾನುಗಳ ರಾಶಿ ಅದ. ನನಗೆ ತಿಳಿದಂತೆ ನಿಮ್ಮ ಇಂಜನ್ನಿನ ಭಾಗಗಳು ಇನ್ನೂ ಏನಾದರೂ ಅಲ್ಲೇ ಇರಬಹುದು.

ಭಿಕ್ಕು : ಈ ಗೋಪನ್‌ಲಾಲನ ಗೋದಾಮು ಎಲ್ಲಿ ಇದ?

ಹು. –೨ : ನಾವು ಕಳ್ಳ ಪೋಲೀಸ ಆಟ ಆಡೋ ಜಾಗ ಅದೇ.

ಹು. –೧ : ಅಡಗಿ ಕೂಡಲು ಅಲ್ಲಿ ಬಹಳ ಜಾಗೆ ಅದ.

ಭಿಕ್ಕು, ಟುಕ್, ಟುಕ್ : ನಡೀರಿ, ಅಲ್ಲಿ ಹೋಗೋಣ. ನಮ್ಮ ಇಂಜನ್ನಿನ ಪೂರ್ತಿ ತಯಾರಿ ಅಲ್ಲೇ ಮುಗಿಬಹುದು ಅನಿಸ್ತಾ ಇದ.

(ಗೋಪನ್‌ಲಾಲನ ಗೋದಾಮಿನ ದೃಶ್ಯ, ಭಯ್ಯಾ, ಭಿಕ್ಕು ಮತ್ತು ಎರಡೂ ಹುಡುಗರು ಎಡ ಬದಿಯಿಂದ ಪ್ರವೇಶಿಸುತ್ತಾರೆ.)

ಹು. –೧ : ಇಲ್ಲಿ ನೋಡಿ, ಇಲ್ಲಿ ಒಣಗಿದ ಸಗಣಿ ಪುಡಿ ಮಾಡಿಡತಾರ.

ಭಿಕ್ಕು : ಒಣಗಿದ ಸಗಣಿ..... ಯಾಕ?

ಹು. –೧ : ಯಾಕೆಂದ್ರ, ಕೋತಂಬರಿ ಬೀಜದಲ್ಲಿ ಸೇರಿಸೋದಕ್ಕ.

ಭಿಕ್ಕು : ಛೀ, ಛೀ, ನಾವು ತಿನ್ನೋ ಹುಳಿ, ಪಲ್ಯದಾಗ ಹಾಕೋ ಮಸಾಲಿ ಒಳಗ ಸಗಣಿ ಇರತದ?

ಹು. –೨ : ಹುಂ ಮತ್ತೆ – ಯಾರು ಪೇಟೆಯಲ್ಲಿ ಖರೀದಿ ಮಾಡತಾರೋ, ಅವರ ಕೋತಂಬರಿ ಬೀಜಗಳಲ್ಲಿ ಸಗಣಿ ಇದ್ದೇ ಇರತದ.

ಟುಕ್, ಟುಕ್ : ಅಂದ್ರ ಇವತ್ತಿನಿಂದ ಇದರ ಖರೀದಿ ಬಂದ್

ಹು. –೧ : ಅಂದ್ರ ಬರೀ ಸಪ್ಪಗೆ ಇರು. ಪಲ್ಲೆ, ಸಾಂಬಾರ ತಿಂತೀರಿ?

ಭಿಕ್ಕು : ಸಪ್ಪಗಿರೋದು ಯಾಕೆ, ಉಪ್ಪು, ಖಾರ...... ಮತ್ತ ಮಸಾಲಿ ಸಾಮಾನು

ಹು. –೨ : ಗೋಪನ್‌ಲಾಲನ ವ್ಯಾಪಾರದ ರಹಸ್ಯ ಇದು.

ಹು. –೧ : ಉಪ್ಪಿನೊಳಗೆ ರಂಗೋಲಿ ಪುಡಿ.

ಹು. –೨ : ಖಾರಾಪುಡಿಯಲ್ಲಿ ಇಟ್ಟಿಗೆ ಪುಡಿ.

ಹು. –೧. : ಮತ್ತೆ ಅಕ್ಕಿಯಲ್ಲಿ ಹರಳು.

ಹು. –೨ : ಇಷ್ಟೇ ಅಲ್ಲ, ಅವನು ತೂಕಾ ಮಾಡೋ ತಕ್ಕಡಿ, ಅದರ ಅಳತೆ ಕಲ್ಲು ಸಹ ಸರಿ ಇಲ್ಲ. ತೂಕ ಮಾಡುವಾಗ ಮೋಸ ಮಾಡತಾನ.

ಹು. –೧ : ಅಳತೆ ಒಳಗ ಕಮ್ಮಿ ಮಾಡತಾನ.

ಹು. –೨ : ಧಾನ್ಯ ಒಳಗ ಗುಪ್ತವಾಗಿಟ್ಟು ಇಲ್ಲ ಅಂತಾನ. ದರ ಹೆಚ್ಚಿಗೆ ಹೇಳತಾನ.

ಹು. –೧ : ಇವತ್ತಿನ ರೇಟ್ ನಾಳೆ ಇಲ್ಲ. ನಾಳೆಯದ್ದು ನಾಡಿದ್ದು ಇಲ್ಲ.

ಟುಕ್, ಟುಕ್ : ಅಂದ್ರ ಎಲ್ಲರಿಗೂ ಮೋಸ ಮಾಡಿ ತಾನು ಮಜಾ ಮಾಡ್ತಾನ

ಭಿಕ್ಕು : ಈ ಜಗತ್ತಿನೊಳಗೆ ಎಂತೆಂಥ ಜನ ಇದ್ದಾರಪ್ಪ !

ಹು. –೧ : ಅಂದ್ರ ಈ ಕೆಲಸಕ್ಕೆಂದು ದೊಡ್ಡ ದೊಡ್ಡ ಮಶೀನು ಖರೀದಿ ಮಾಡಿದ್ದಾನ.

ಟುಕ್, ಟುಕ್ ಅಂದ್ರ ಈ ಲಾಲ, ಧಾನ್ಯ ಮುಚ್ಚಿಡತಾನ. ಧಾರಣೆ ಏರಸ್ತಾನ, ದೇಶದಾಗ ಕಾಯಿಲೆ, ಕಸಾಲೆ ಹರಡತಾನ.

ಭಿಕ್ಕು : ಎಲ್ಲರಿಗೂ ಚಿತ್ರಹಿಂಸೆ ಕೊಟ್ಟು ಅವರನ್ನು ಸಾಯಿಸ್ತಾ ಇದ್ದಾನೆ.

ಹು. –೧ : ಸೇಠ ಗೋಪನ್‌ಲಾಲ್.

ಹು. –೨ : ಕಳ್ಳ ಗೋಪನ್‌ಲಾಲ್.

ಟುಕ್, ಟುಕ್ ಗೋಪನ್‌ಲಾಲ್ ಬ್ಲಾಕ್ ಮಾರ್ಕೆಟ್ ಖದೀಮ.

ಎಲ್ಲರೂ : ನಡೀರಿ, ಈ ಕಳ್ಳನ್ನು ಹಿಡಿಯೋಣ (೪ ಸಾರೆ.)

ಹು. –೧ : ಅದೋ ಅಲ್ಲಿ, ಅಂವ ಬರ್‍ತಾ ಇದ್ದಾನೆ. ನಡೀರಿ ಆ ಚೀಲದ ಹಿಂದೆ ಅಡಗಿ ಕುಳಿತು ನೋಡೋಣ.

(ಗೋಪನ್‌ಲಾಲ್, ಒಂದು ಚೀಲ ಹೊತ್ತು ಬರುತ್ತಾನೆ. ಅದರ ಮೇಲೆ ಖಾರದಪುಡಿ ಎಂದು ಬರೆದಿದೆ. ಮೆಟ್ಟಿಲು ಹತ್ತಿ ಅದನ್ನು ತುಂಬಿಕೊಳ್ಳುತ್ತಾನೆ. ಎಲ್ಲರೂ ಮೆಲ್ಲನೆ ಬಂದು ಅವನನ್ನು ಮುತ್ತುತ್ತಾರೆ.)

ಎಲ್ಲರೂ ಕಳ್ಳ, ಕಳ್ಳ, ಕಳ್ಳ, ಕಳ್ಳ (೩ ಸಲ)

ಗೋಪನ್‌ಲಾಲ್ ಯಾರದಾರು? ಇಲ್ಲಿ ಗದ್ದಲ ಮಾಡುವವರು, ನಾಚಿಕೆ ಇಲ್ಲದವರೇ, ಇಲ್ಲಿ ಬಂದು ನನ್ನನ್ನೇ ಕಳ್ಳ ಎನ್ನುವಿರೋ?

ಎಲ್ಲರೂ : ಹೌದು, ನೀನು ಕಳ್ಳ, ನಾವು ಪೋಲೀಸರು.

ಗೋಪನ್‌ಲಾಲ್ ಬದಮಾಶಗಳೇ, ತಡೀರಿ, ನಿಮಗೇನು ಮಾಡ್ತೀನಿ ನೋಡಿ.

ಎಲ್ಲರೂ : ನೀನೇ ಕಳ್ಳ, ನೀನೇ ಬದಮಾಶ, ಸಾಮಾನುಗಳನ್ನು ಮುಚ್ಚಿಡತಿದ್ದಿ. ಬ್ಲಾಕ್ ಮಾರ್ಕೆಟ್ ಮಾಡತಿದ್ದಿ, ಮೋಸ ಮಾಡತಿದ್ದಿ.

ಗೋಪನ್‌ಲಾಲ್ ಬಾಯಿ ಮುಚ್ಚಿರಿ.

ಎಲ್ಲರೂ : ನೀನು ನಮ್ಮನ್ನು ಸುಮ್ಮನೆ ಇಡಲಿಕ್ಕೆ ಸಾಧ್ಯ ಇಲ್ಲ. ಕಳ್ಳ, ಮಹಾಕಳ್ಳ

ಗೋಪನ್‌ಲಾಲ್ ಮತ್ತೆ ಕಳ್ಳ ಅಂತೀರಿ. ಅನಬ್ಯಾಡರಿ ಏನೂ ಅನ್ನಬ್ಯಾಡರಿ. ಗದ್ದಲ ಮಾಡಬ್ಯಾಡರಿ. ನಿಮಗ ತಿನ್ನಲಿಕ್ಕೆ ಏನು ಬೇಕು, ಕೊಡತೀನಿ.

ಭಿಕ್ಕು : ಅಂದ್ರ ಈ ಕಲಬೆರಕೆ ಸಾಮಾನಿನಿಂದ ತಯಾರಿಸಿದ ತಿಂಡಿ ಕೊಡ್ತಿ.

ಗೋಪನ್‌ಲಾಲ್ ಇಲ್ಲ, ಶುದ್ಧ ವಸ್ತುಗಳಿಂದ ಮಾಡಿದ್ದು. ಮತ್ತ ಮೇಲೆ ಹಣಾನೂ ಕೊಡ್ತೀನಿ.

ಟುಕ್, ಟುಕ್ : ನಿನ್ನ ಈ ಕಳ್ಳ ದಂಧೆಯಿಂದ ಗಳಿಸಿದ ತಿಂಡಿ, ಹಣ, ನಮಗೆ ಬೇಡ. (ಭಿಕ್ಕು ಮೆಟ್ಟಿಲು ಹತ್ತಿ ಅಲ್ಲಿರುವ ಬೂಸಾವನ್ನು ಅವನ ತಲೆಯಮೇಲೆ ಕವುಚಿ ಹಾಕುತ್ತಾಳೆ. ಶೇಠ ಚೀರಾಡುತ್ತಾನೆ. ಎಲ್ಲರೂ ನಗುತ್ತಾರೆ.)

ಗೋಪನ್‌ಲಾಲ್ ಅರೆ, ಈ ಬಕೇಟು ನನ್ನ ತಲೆ ಮೇಲಿಂದ ತೆಗೆಯಿರಿ. ನನಗೆ ಉಸಿರು ಕಟ್ಟುತ್ತಾ ಇದೆ.

(ರಂಗದ ಸುತ್ತು ಹಾರುತ್ತ ಓಡಾಡುತ್ತಾನೆ.)

ಟುಕ್, ಟುಕ್ : ಇವನ ಪರಿಸ್ಥಿತಿ ನೋಡಿದ್ರ ನನಗ ಒಂದು ಆಟ ನೆನಪಿಗೆ ಬರ್ತದ.

ಭಿಕ್ಕು : ನನಗೂ ನೆನಪಿಗೆ ಬಂತು ಬರ್ರಿ, ಆಡೋಣ.

ಹು. -೧ : ಈ ಬಕೆಟ್ ತೆಗಿಲೇನು?

ಗೋಪನ್‌ಲಾಲ್ ಹೂಂ ತೆಗಿಯೋ, ಜಲ್ದಿ ತೆಗಿ.

ಹು. -೨ : ನಮ್ಮ ಜೊತೆ ನೀನು ಆಟ ಆಡು, ಅಂದ್ರ ತೆಗಿಯೋದು.

ಗೋಪನ್‌ಲಾಲ್ ಹೂಂ, ಆಡತೇನಿ. ಆಡತೇನಿ. (ಆಟ ಆರಂಭವಾಗುತ್ತದೆ. ಅವನನ್ನು ಒಬ್ಬರಾದ ಮೇಲೆ ಒಬ್ಬರು ತಳ್ಳಿ ಕೊನೆಗೆ ಬಕೆಟ್ ಜೊತೆಗೆ ಒಳಗ ತಳ್ಳುತ್ತಾರೆ.

ಭಿಕ್ಕು : ಭಯ್ಯಾ, ಈ ಭಾಗ ನೋಡ್ರಿ, ನಮ್ಮ ಇಂಜನ್ ಸಾಮಾನು ಕಾಣಸ್ತದ.

ಟುಕ್, ಟುಕ್ : ಅರೆ, ಹೌದು, ನಡಿ ಜೋಡಿಸೋಣ. (ಎಲ್ಲರೂ ಹೋಗಿ ಜೋಡಿಸುತ್ತಾರೆ.)

ಹು. -೧ : ವಾಹ್, ವಾಹ್, ಇಂಜನ್ ರೆಡಿ.

ಹು. -೨ : ಇಂಜನ್, ಏನೋ ತಯಾರಿ ಆಯ್ತು. ಉಳಿದ ಸಾಮಾನು ಇಲ್ಲೆ ಇರಬಹುದು ಅಂತ ಕಾಣಿಸ್ತದ.

ಹು. -೧ : ಹೌದು, ಹುಡುಕಬೇಕು.

ಭಿಕ್ಕು : ಹುಡುಕೋಣ. ಆದ್ರ ಈ ಗೋಪನ್‌ಲಾಲನ ಮೇಲೆ ಒಂದು ಕಣ್ಣಿಡಬೇಕು.

ಟುಕ್, ಟುಕ್ : ಇನ್ನೂ ಇಲ್ಲಿಯೇ ಇದ್ದೀರಿ. ಅವನಿಗೆ ಇನ್ನೂ ಜೇಲಿನ ಹವಾ, ಪೋಲೀಸರ ಲಾಠಿ ಪೆಟ್ಟು ಹಾಕಿಸಬೇಕು. (ಗೋಪನ್‌ಲಾಲ ಬರುತ್ತಾನೆ. ಅಲ್ಲಿ ಇರುವ ಒಂದು ಗಾಲಿಯನ್ನು ಎತ್ತುತ್ತಾನೆ. ಜನರ ಧ್ವನಿ ಕೇಳುತ್ತದೆ. ಅದನ್ನೆತ್ತಿಕೊಂಡು ಓಡುತ್ತಾನೆ.) ನನಗೆ ಇಲ್ಲಿ ಏನೋ ಸಿಕ್ಕಿತು.

ಭಿಕ್ಕು : ಇಷ್ಟು ಬೇಗನೇ ? ಈ ಹುಡುಗರೂ ಹುಡುಕ್ತಾ ಇದ್ದಾರೆ. ಅವರಿಗೇನಾದರೂ ಸಿಕ್ಕಬಹುದು.

ಟುಕ್, ಟುಕ್ ನಡಿ, ಅಲ್ಲಿ ಹೋಗಿ ನೋಡೋಣ. ಇದೊಂದು ಜೋಡಿಸೋಣ. (ಜೋಡಿಸಿ) ತಕ್ಕಳಪ್ಪ ಇದು ಸರಿ ಹೋಯಿತು. ಈಗ ಒಂದು ಬದಿ ಆಯ್ತು. ಇನ್ನೊಂದುಬದಿ?

ಭಿಕ್ಕು : ಇಲ್ಲ ಇದು ಯಾಕೋ ಸರಿಯಾಗ್ತ ಇಲ್ಲ.

ಟುಕ್ ಟುಕ್ : ಯಾಕಾಗ್ತಾ ಇಲ್ಲ, ಸರಿಯಾಗ್ದೆ ಇದ್ರ ನನ್ನ ಮೀಸೆ ತೆಗೀತೀನಿ.

ಭಿಕ್ಕು : ತೆಗೀರಿ, ಇನ್ನೂ ಚನ್ನಾಗಿ ಕಾಣಿಸಬಹುದು. ಇಲ್ಲಿ, ಇದನ್ನು ನೋಡಿ. ಎಲ್ಲಿ ಜೋಡಿಸಬೇಕು ನೋಡಿ.

ಟುಕ್, ಟುಕ್ (ದೂರದಿಂದ ನೋಡುತ್ತ) ಏನೋ ಮೋಸ ಆಗೇದ.

ಭಿಕ್ಕು : ಅಂದ್ರ ಏನೋ ಮಾಯ ಆಗೇದ.

ಟುಕ್, ಟುಕ್ (ಪ್ರೇಕ್ಷಕರಿಗೆ) ಏನು, ಇಲ್ಲಿಂದ ಮಾಯ ಆಗಿದ್ದು (ಜನರ ಧ್ವನಿ ) ಅಂ, ಗಾಲಿ, ಕರೆಕ್ಟ್ ಒಂದು ದೊಡ್ಡ ಗಾಲಿನ ಮಾಯ ಆಗೇದ. ಸರಿ,ಸರಿ, ಅಂವ ಬರ್ಲಿ, ಆಗ ಮಜಾ ಬರ್ತದ.

ಭಿಕ್ಕು : ಬಹಳ ಮೋಸಗಾರ ಹಾವ.

ಟುಕ್, ಟುಕ್ : ನಮ್ಮಕ್ಕಿಂತ ಸ್ಮಾರ್ಟ ಅಂತ ತಿಳಕಂಡಾನ.

(ಈ ಮಧ್ಯೆ ಗೋಪನ್‌ಲಾಲ್ ಬಂದು ಇನ್ನೊಂದು ಒಯ್ಯುತ್ತಾನೆ.)

ಭಿಕ್ಕು : ಭಯ್ಯಾ ನೋಡ್ರಿ ಯಾರೋ ಬಂದ ಹಾಗಿದೆ.........

ಟುಕ್, ಟುಕ್ : ಉಶ್ಶ, ಸುಮ್ಮನೇ ಇರು. ಸ್ವಲ್ಪ ಮರೆಯಾಗಿ ನೋಡೋಣ. (ಅಡಗಿಕೊಳ್ಳುತ್ತಾರೆ. ಗೋಪನ್‌ಲಾಲ್ ಬಂದು ಗಾಲಿ ಬಿಚ್ಚಲು ಪ್ರಯತ್ನಿಸುತ್ತಾನೆ. ಭಯ್ಯಾ ನೋಡುತ್ತಾನೆ.)

ಟುಕ್, ಟುಕ್ : ಇದೇನು ಮಾಡ್ತಾ ಇದ್ದೀರಿ ಶೇಠ

ಗೋಪನ್‌ಲಾಲ್ (ಗಾಬರಿಯಾಗಿ) ನಾನು..... ನಾ.... ಅರೆ, ನೀನು ಟುಕ್, ಟುಕ್ ಭಯ್ಯಾ ಅಲ್ಲ? ಅದೇ ಟುಕ್ ಟುಕ್ ಭಯ್ಯಾ, ಕಾಲಮ್ ಕಾಲ್, ಬಹಳ ಖುಶಿ ಆಯ್ತು ನಿನ್ನ ನೋಡಿ. ಇದು ನಿಮ್ಮದೇ ಏನು? ನಾನು ನೋಡಿದೆ. ಸ್ವಲ್ಪ ರಿಪೇರಿ ಮಾಡಬೇಕು ಅನ್ನಿಸಿತು.

ಟುಕ್, ಟುಕ್ : ನಾನೇ ಟುಕ್, ಟುಕ್ ಭಯ್ಯಾ ಎಂದು ನಿಮಗೆ ಹೇಗೆ ಗೊತ್ತಾಯಿತು?

ಭಿಕ್ಕು : (ಬೋರ್ಡ್ ಒಂದನ್ನು ಎಡವಿ) ಅರೆ, ಬೇಡ ಎನ್ನುವುದು ಬೇಡ. ಇದು ನಾನು ಬರೆದದ್ದು. ಬೆಡ ಬೆಡದಾಸ ಮನಿವಳಗ, ಇಲ್ಲಿ ಹೇಗೆ ಬಂತು?

ಟುಕ್, ಟುಕ್ : ಬೆಡ, ಬೆಡದಾಸ (ಗೋಪನ್‌ಲಾಲ ಓಡಲು ಪ್ರಯತ್ನಿಸುತ್ತಾನೆ. ಭಯ್ಯಾ ಮತ್ತು ಭಿಕ್ಕು ಹಿಡಿಯುತ್ತಾರೆ.)

ಟುಕ್, ಟುಕ್ : ಹೇಗೆ ಇದ್ದೀರಿ, ಗೋಪನ್‌ಲಾಲ ಶೇಠ

ಗೋಪನ್‌ಲಾಲ್ ಆರಾಮವಾಗಿದ್ದೇನೆ. ಮಜವಾಗಿದ್ದೇನೆ. (ದೇಶಾವರಿ ನಗೆ)

ಭಿಕ್ಕು : ಅದಂತೂ ನಮಗೆ ಗೊತ್ತೇ ಇದೆ. ನೋಡ್ರಿ, ಎಷ್ಟು ಕಷ್ಟ ಪಡ್ತಾ ಇದ್ದೀರಿ. ನಿಮಗೆ ಆರಾಮ ಬೇಕು, ನಾವು ಕೊಡ್ತೀವಿ. (ಭಿಕ್ಕು, ಭಯ್ಯಾ, ಅವನ ಕೃತಕ ಗಡ್ಡ ಮೀಸೆಗಳನ್ನು ಕಿತ್ತುವರು.)

ಭಿಕ್ಕು : ಅರೆ ಇಂವ ಬೆಡ, ಬೆಡದಾಸ್ !

ಟುಕ್, ಟುಕ್ : ಗೋಪನ್‌ಲಾಲ, ಬೆಡ, ಬೆಡದಾಸ, ಇಬ್ಬರೂ ಒಂದೇ. ಒಂದು ಕಡೆ ಕೆಟ್ಟದ್ದು ಮಾಡಬೇಡಿ ಎಂದು ಉಪದೇಶ. ಇನ್ನೊಂದು ಕಡೆ ಸ್ವತಃ ಕೆಟ್ಟ ಕೆಲಸಗಳನ್ನು ಮಾಡುವುದು. ಅದೂ ಕಾನೂನಿನ ವಿರುದ್ಧ ಕೆಲಸಗಳು.

ಭಿಕ್ಕು : ಕಳ್ಳ, ದಗಲ್‌ಬಾಜಿ.

ಗೋಪನ್‌ಲಾಲ್ ನಾ ಕಳ್ಳ ಅಲ್ಲ. ನಾ ಏನೂ ಕಳ್ಳತನ ಮಾಡಿಲ್ಲ. ನಾ ಯಾರನ್ನೂ ಲೂಟ್ ಮಾಡಿಲ್ಲ.

ಟುಕ್, ಟುಕ್ : ನಮ್ಮ ಇಂಜನ್ನಿನ ಭಾಗ, ಈಗ ಸ್ವಲ್ಪ ಹೊತ್ತಿಗೆ ಮುಂಚೆ

ಗೋಪನ್‌ಲಾಲ್ ಯಾವ ಭಾಗ, ಇಲ್ಲಿಂದ ಏನು ಕಳ್ಳತನ ಆಗದ (ಪ್ರೇಕ್ಷಕರಿಗೆ) ಏನ್ರಿ, ಇಲ್ಲಿ ಏನು ಕಳ್ಳತನ ಆಯಿತು ಹೇಳ್ರಿ.

ಭಿಕ್ಕು : ನೀನು ಇದೇ ಇಲ್ಲಿಂದು ಎತ್ತಿ ಓಡಿ ಹೋದದ್ದು. ಕಳ್ಳ, ಬದಮಾಶ !

ಗೋಪನ್‌ಲಾಲ್ ನಾಲಿಗೆ ಬಿಗಿ ಹಿಡಿ. ನನ್ನ ಹತ್ತಿರ ನಿಮ್ಮ ಇಂಜನ್ನಿನ ಯಾವ ಭಾಗ ಇಲ್ಲ. ತಿಳಿತಾ?

ಬರತೇನಿ. ನಮಸ್ಕಾರ, ನನಗ ಭಾಳ ಕೆಲಸ ಅವ.

ಚುಕ್, ಚುಕ್ : ಅರೆ ಎಲ್ಲಿಗೆ ಹೋಗತೀರಿ ಸಾಹೇಬರ, ಸ್ವಲ್ಪ ಇರಿ.

ಮುದುಕಿ : (ಒಳಗಿನಿಂದ) ಯಾವನೋ ಅವನು ನನ್ನ ಗೋಧಿವಳಗ ಕಸಾ ಕಲಿಸ್ಯಾನ. ಅವನ ವಂಶ ನಿರ್ವಂಶ ಆಗ್ಲಿ. ಅವನ ಕೈ ಕ್ಷತ್ತರಿಸಿ ಬೀಳಲಿ. (ಎರಡು ಹುಡುಗರ ಹಿಂದೆ ಬರುವಳು.)

ಚುಕ್, ಚುಕ್ : ಅರೆ, ಇದು ಸಹಿತ ನಮ್ಮ ಇಂಜನ್ನಿನದೇ ಇದೇ ಮುದುಕಮ್ಮ, ಇದು ನಿನಗೆ ಎಲ್ಲಿ ಸಿಕ್ಕಿತು?

ಮುದುಕಿ : ನಾನು ಬಿಸಿಲಿನಲ್ಲಿ ಗೋಧಿ ಒಳಗಲು ಹಾಕಿದ್ದೆ. ರಾಕ್ಷಸರು ಬಂದು ಎಲ್ಲಾ ಹಾಳುಮಾಡಿ ಹೋಗ್ಯಾರ.

ಹುಡುಗರು : ನಾವು ಮಾಡಿಲ್ಲ.

ಮುದುಕಿ : ಮತ್ತೆ ಯಾರು ಮಾಡ್ಯಾರಲೇ, ಹರಾಮುಚೋರ ನನ ಮಕ್ಕಳೇ

ಹು. –೨ : ಸೇಟಜೀ ಹಾಕ್ಯಾರ

ಹು. –೧ : ಸೇಟಜೀ ಇಂಜನ್ನ ಗಾಲಿ ಎತ್ತಿಕೊಂಡು ಓಡ್ತಾ ಇದ್ದರು. ಅವರನ್ನ ನೋಡಿ ನಾವು ಹಿಂದೆ ಓಡಿದವು.

ಹು. –೨ : ನಾವು ಓಡೋದು ನೋಡಿ ನಾವೇ ಈಕೆಯ ಗೋಧಿ ಹಾಳು ಮಾಡಿದ್ದು, ಈ ಗದ್ದಲದಾಗ ಆ ಶೇಠ ಎಲ್ಲಿ ಮಾಯ ಆದ ತಿಳೀವಲ್ಲದು.

ಮುದುಕಿ : ಸುಳ್ಳು, ನಿಮ್ಮ ಬಾಯಾಗ ಹುಳ ಬೀಳತಾವ ಸುಳ್ಳು ಹೇಳಿದರೆ. ಪಾಪ ಶೇಠ ಯಾಕ ಕಳ್ಳತನ ಮಾಡ್ತಾರ?

ಭಿಕ್ಕು : ಯಾಕೆಂದ್ರೆ ಇವರು ಗೋಪನ್‌ಲಾಲ ಶೇಠ ಅಲ್ಲ, ಚಿಡ ಚಿಡದಾಸ ಇದ್ದಾನ. ಅವನೇ ಈ ಇಂಜನ್ನ ಚೂರು ಚೂರು ಮಾಡಿದ್ದು. ಇದೇ ಆ ಇಂಜನ್ನು.

ಮುದುಕಿ : ಅಯ್ಯೋ ಪಾಪ, ಇಷ್ಟು ಚಲೋ ಇಂಜನ್ನ ಯಾಕ ಚೂರು ಚೂರು ಮಾಡಿದಿ. ನಡ್ರಿ ಮೊದ್ಲು ಇದನ್ನ ಜೋಡಿಸಿ ಉಳಿದದ್ದು ಹುಡುಕಿ.

ಹು. –೧ : ಭಯ್ಯಾ ನೋಡ್ರಿ ಇದೇನಿದು? ಇದೂ ನಮ್ಮ ಇಂಜನ್ನಿನದೇ ಇರಬಹುದು.

ಹು. –೨ : ಮತ್ತೆ ಇದು ನೋಡಿ.

ಹು. –೧ : ಇದೂ ಇಂಜನ್ನಿನದೇ ಇರ್ತದ.

ಚುಕ್, ಚುಕ್ : ಹುಡುಗರೇ ದೇವರೇ ನಮ್ಮ ಸಹಾಯಕ್ಕೆ ಬಂದಿರಬೇಕು. ಆದಕ್ಕೆಂದೇ ಎಲ್ಲಾ ಭಾಗಗಳು ದೊರೆತಿವೆ. ಆದರೂ ಈ ಇಂಜನ್‌ನ ಕೆಲಸ ಪೂರ್ತಿ ಆಗಿಲ್ಲ. ಇನ್ನೂ ಒಂದು ಕೊನೆ ಕೆಲಸ ಉಳಿದಿದೆ. (ಹುಡುಗರು ಜೋಡಣೆಯ ಕೆಲಸದಲ್ಲಿ ತೊಡಗಿದ್ದಾರೆ.)

ಚಿಡ, ಚಿಡ : ಈ ಇಂಜನ್ನಿನ ರಿಪೇರಿ ತಪ್ಪು.

ಭಿಕ್ಕು : ಬೇಡ ಎನ್ನುವುದು ಬೇಡ

ಮುದುಕಿ : ಇದು ಇದನ್ನು ಬರೆದದ್ದು ನೀನೇ ಏನು? ಶಭಾಶ, ಸತ್ಯವಾದ ಮಾತನ್ನೇ ಬರೆದಿರುವಿ.

ಟುಕ್, ಟುಕ್ : ಎಲ್ಲಾ ಮುಗಿತು. ಈ ಡ್ರೈವರ್ ಕ್ಯಾಬಿನ್ ಸಿಗಬೇಕು ಅಷ್ಟೆ

ಚಿಡ ಚಿಡದಾಸ : ನೀವು ಅದನ್ನ ಮಾತ್ರ ಹುಡುಕಲಿಕ್ಕೆ ಸಾಧ್ಯ ಇಲ್ಲ.

ಭಿಕ್ಕು : ಯಾಕೆ? ಯಾಕೆ ಸಾಧ್ಯ ಇಲ್ಲ? ಹೇಳ್ರಿ

ಚಿಡ ಚಿಡದಾಸ : ಈ ಬೋರ್ಡ್ ಅಳಿಸಿದರೆ ಹೇಳತೀನಿ.

ಮುದುಕಿ : ಬೇಡ ಅದನ್ನು ಕಳಿಸಬೇಡಿ. ನನಗೆ ಇಕ್ಲಿ. ನಾನು ಒಯ್ಯುತ್ತೇನೆ. (ಅದನ್ನೆತ್ತಿಕೊಳ್ಳಲು ಸನ್ನದ್ಧಳಾಗುತ್ತಾಳೆ.)

ಟುಕ್, ಟುಕ್ : ಅಜ್ಜಿ ನಿಲ್ಲಿರಿ. (ಬೋರ್ಡ್ ತಿರುಗಿಸಿ) ಅರೆ, ಇದು ಡ್ರೈವರ್ ಕ್ಯಾಬಿನ್ನಿನ ಭಾಗ. (ಎಲ್ಲರೂ ಖುಶಿಯಾಗುತ್ತಾರೆ. ಚಿಡಚಿಡ ದಾಸ ಮುಖ ಮುಚ್ಚಿ ಅಳುತ್ತಾನೆ.)

ಮುದುಕಿ : ಈಗ ಅಳಲಿಕ್ಕೆ ಏನಾಗೆದ..... ಇಂಜನ್ನ ಸಿಕ್ಕಿತು. ನಗು ಈಗರ........... ನಿನ್ನ ಕೆಟ್ಟ ಗುಣ ಬಿಡು........... ಸಣ್ಣ ಮಕ್ಕಳ ಹಾಗೆ ಒಳ್ಳೆಯ ಮನಸ್ಸು ಇಕ್ಲಿ.......... ಮಕ್ಕಳು ಅಂದ್ರೆ ದೇವರು ಸಮಾನ....... (ಇಂಜನ್ನ ಪೂರ್ತಿಯಾಗಿ, ಸ್ಟಾರ್ಟ್ ಆಗುತ್ತದೆ. ಎಲ್ಲರೂ ಕೇಕೆ. ರೈಲುಗಾಡಿ ಹಾಡು ಪ್ರಾರಂಭ....... ತೆರೆ.)

(ರೈಲುಗಾಡಿ ನಿಧಾನ ಚಲಿಸುವುದು. ಅದರೊಂದಿಗೆ ಎಲ್ಲಾ ಜನ ಬಂದು ಸೇರುವರು. ಉತ್ಸಾಹ, ಸಂತೋಷ. ಇ. )

## ಹಾಡುಗಳು

### ೧. ಇಂಜನ್ನಿನ ಹಾಡು

ಮುದ್ದಿನ ಪ್ರೀತಿಯ ಟುಕ್, ಟುಕ್ ಬಂಡಿ
ನನ್ನಯ ಪ್ರೀತಿಯ ಟುಕ್, ಟುಕ್ ಬಂಡಿ
ಇದರಲಿ ಕುಳಿತು ಹೋಗುವ ನಾವು
ಜಗದ ದೇಶಗಳ ನೋಡುವ ನಾವು
ನಗುತಾ ನಲಿಯುತ ಹಾಡುತ ನಾವು
ಮರೆತುಬಿಡೋಣ ದುಃಖವ ನಾವು —೧—

ಟುಕ್, ಟುಕ್ ಎನ್ನುತ ಸಾಗುವೆ ನೀನು
ಒಂದೇ ಸಮನೆ ಓಡುವೆ ನೀನು
ಹೊಗೆಯುಗುಳುತ ನೀರ್ ಕುಡಿಯುವೆ ನೀನು

ನಗುತಾ ನಗಿಸುತ ನಲಿಯುವ ನೀನು -೨-
ಕಪ್ಪಾಗಿರುವ ಕರಿಕಪ್ಪನು ತಿನ್ನುವ
ಅಚ್ಚ ಬಿಳಿ ಮನಸನು ಹೊಂದಿರುವಂತ
ಕರೆಯುವ ನಮ್ಮನು ಸೀಟಿಯನೂದುತ
ಸಾಗುತಲಿರುವ ಊರಿಂದೂರನು ಸೇರುತ -೩-

ಮುದ್ದಿನ ಪ್ರೀತಿಯ ಚುಕ್, ಚುಕ್ ಬಂಡಿ
ನನ್ನಯ ಪ್ರೀತಿಯ ಚುಕ್ ಬಂಡಿ

## ೨ ಮಾಸ್ತರನ ಹಾಡು

ಕೋಪದಿ ಉರಿದರೆ ಎಲ್ಲವೂ ಹಾಳು
ಕಣ್ಣೀರಿನ ಜೀವನ ಜೀವನವೇ ಹೇಳು?
ಇಡೀ ದಿನವನು ಈ ಮಕ್ಕಳು
ಮಾತಾಡುತ ಮಾಡ್ವರು ಹಾಳು
ಗಲಾಟೆ ಮಾಡುತ ಇವರು
ಎಂದೂ ಇವರ ಶಾಲೆಗೆ ಬಾರರು
ಪ್ರಶ್ನೆ ಉತ್ತರ ತಿಳಿಯದ ಈ ಮಕ್ಕಳ
ಸುಮ್ಮನೆ ಕಳೆಯುವ ಜೀವನ ಜೀವನವೇ ಹೇಳು?
ಈ ಗಲಾಟೆ ಈ ತುಂಟಾಟ
ಈ ಆಡಂಬರದ ಮೊಂಡಾಟ
ಹಗಲಿಡೀ ಆಡುವ ಜಗಳಾಟ
ಸ್ನೇಹದಿಂದಲೇ ಕೊನೆ ಈ ಹಾರಾಟ
ಸುಮ್ಮನೆ ಇರುವುದು ಜೀವನವೇ ಹೇಳು?
ಅದು ಜೀವನವೇ ಅಲ್ಲ ಬರೀ ಗೋಳು.

## ೩. ಜೋಗುಳದ ಹಾಡು

ಜೋ, ಜೋ, ರೈಲು ಕುಮಾರ
ಬಣ್ಣದ ಕನಸಲಿ ಮಲಗ್ಗೆ ಕುಮಾರ..... ಜೋ ಜೋ
ಹಗಲಿರಿ ಚುಕ್, ಭುಕ್ ಎನ್ನುತ ನೀನು
ಎಲ್ಲಿಯೂ ನಿಲ್ಲದ ತಿರುಗುತ ನೀನು
ಊರಿಂದೂರಿಗೆ ಅಲೆಯುವಿ ನೀನು
ಒಂದೇ ಸಮನೆ ದಣಿಯುವಿ ನೀನು..... ಜೋ.. ಜೋ....
ಜೋ... ಜೋ.... ರೈಲು ಕುಮಾರ
ಬಣ್ಣದ ಕನಸಲಿ ಮಲಗು ಕಿಶೋರ.

## ೪. ಮಾರ್ಚಿಂಗ್ ಹಾಡು

ನಡೆ ಮುಂದೆ, ನಡೆ ಮುಂದೆ ನುಗ್ಗಿ ನಡೆ ಮುಂದೆ
ಒಂದು, ಎರಡು, ಒಂದು ಎರಡು ಕಾಲನು ಕುಣಿಸುತ
ಒಟ್ಟಿಗೆ ನಡೆಯಿರಿ ಒಟ್ಟಿಗೆ ಇರಿ, ಒಟ್ಟಿಗೆ ಹೋರಾಡಿ.....
ಬಿರುಗಾಳಿಯೇ ಬರಲಿ, ಗಿರಿ ಪ್ರವಾಹವೇ ಬರಲಿ,
ಬೆಂಕಿಯೇ ಉಗುಳಲಿ, ನೀರೇ ಪುಟಿಯಲಿ,
ನುಗ್ಗುತಲೇ ಇರು, ನೀ ನುಗ್ಗುತಲೇ ಇರು.
ಎಡಾಬಲ, ಎಡಾಬಲಾ, ಎಡಾಬಲಾ, ಎಡಾಬಲಾ,
ತಲೆಬಾಗದೆ ಮೈ ಬಾಗದೇ ಎದೆಯುಬ್ಬಿಸಿ, ತಲೆಯೆತ್ತಿ
ನೀ ನಡೆಯುತ್ತಲೇ ಇರು, ಹೋರಾಡುತ್ತಲೇ ಇರು
ಸಾವಧಾನ ನೋಡಲ್ಲಿ ಹಗೆ,
ಎತ್ತು ಕತ್ತಿ, ಆರಂಭಿಸಿ ದಾಳಿ
ಢಂ, ಢಂ, ಧಡ್ ಧಡ್
ಹೊಡೆಯುತ ಬಡಿಯುತ ಹಗೆಗಳ ನೋಡಿಸು
ನಡೆಮುಂದೆ, ನಡೆಮುಂದೆ ನುಗ್ಗಿ ನಡೆಮುಂದೆ.

## ೫. ನೃತ್ಯಗೀತೆ

ತಾನತಂದಾನ, ತಾನ ತಂದಾನ,
ಕೂಡಿ ಆಡೋಣ, ಆಡಿ ನಲಿಯೋಣ
ತಾನ ತಂದಾನ, ತಾನ ತಂದಾನ
ಆಡಿ, ಹಾಡಿ, ಕುಣಿ ಕುಣಿದಾಡೋಣ.......
ಗಳಿಸಿಯೇ ತಿನ್ನೋಣ, ಅದನು
ಹಂಚಿಯೇ ತಿನ್ನೋಣ
ಗಳಿಸಿದ ಹಣದಲ್ಲಿ ದೊರೆವುದು ಮಜಾ,
ಮೋಸದ ಹಣದಲ್ಲಿ ದೊರೆವುದು ಸಜಾ,
ಗಳಿಸಿರಿ ಸ್ವರ್ಗ, ಉಳಿಸಿರಿ ಸ್ವರ್ಗ,
ನಗುತಲಿ ಬಾಳಿರಿ ನಲಿಯುತ ಹಾಡಿರಿ
ತಾನ ತಂದಾನ, ತಾನ ತಂದಾನ

## ೬ ರೈಲು ಗಾಡಿ ಹಾಡು

ಚುಕ್, ಚುಕ್, ಚುಕ್, ಚುಕ್, ಚಲೋ ಚಲೋ
ಚಲೋ ಚಲೋ ನಮ್ಮ ರೈಲು ಚಲೋ
ನೀಲಾಕಾಶವು ಕರೆಯುತಿದೆ
ಸೂರ್ಯನ ಕಿರಣ ಕರೆಯುತಿದೆ
ಬಿಸಿಲು ಬಿಸಿಲು ಬಿಸಿಲು ಬಿಸಿಲು
ನೆರಳು, ನೆರಳು, ನೆರಳು, ನೆರಳು
ಚಲೋ ಚಲೋ ನಮ್ಮ ರೈಲು ಚಲೋ
ಆಹಾ ಬೆಟ್ಟ ಆಹಾ ಗುಡ್ಡ
ಆಹಾ ಬಣ್ಣದ ಬಣ್ಣದ ತೋಟ
ನೀಲೀ ಅಲೆಗಳ ಸುಂದರ ನೋಡಿ
ಆಗಸದಿರುವ ಚಂದಿರ ತಾರೆಗಳ ಕೂಟ
ಚಲೋ ಚಲೋ ನಮ್ಮ ರೈಲು ಚಲೋ
ನಾವು ನೀವು ನೀವು ನಾವು
ರೈಲಿನ ಗಾಲಿಯ ತಾಳದ ಲಯಕೆ
ನಾಧಿ ಧಿನ್ನಾ, ನಾಧಿ ಧಿನ್ನಾ, ನಾಧಿ ಧಿನ್ನಾ

೩೮ ಛುಕ್, ಛುಕ್, ಛಯ್ಯಾ ತಾಲಮ್ ತಾಲ್

ನಾಧಿ ನಾಧಿ, ಧಿನ್ನಾ ಧಿನ್ನಾ ನಾದಿ ಧಿನ್ನಾ
ಚಲೋ ಚಲೋ ನಮ್ಮ ರೈಲು ಚಲೋ
ನಮ್ಮ ರೈಲಿನ ಚಲನೆ ನಮ್ಮ ರೈಲಿನ ಶಿಟಿ
ಕೇಳಲು ಇಂಪು, ನಮ್ಮ ಪ್ರವಾಸ ತಂಪು
ಜಗವೆಲ್ಲಾ ತಿರುಗುವ ರೈಲಿನ ಚಕ್ರ
ಬದಲಿಸುತಿರುವುದು ಜೀವನ ಚಕ್ರ
ಚಲೋ ಚಲೋ ನಮ್ಮ ರೈಲು ಚಲೋ

## ೭ ಊಟದ ಹಾಡು

ತಿನ್ನಿರಿ ಮಕ್ಕಳೆ ತೇಗಿರಿ ಜನಗಳೆ ಮಜಾ ಮಾಡಿ,
ಲಾಡು ಬೂಂದಿಯು, ಖಾರಾ ಸೇವೆಯು ಹಾಡನು ಹಾಡಿ
ಬನ್ನಿರಿ ಬನ್ನಿರಿ ಗಬಗಬ ತಿನ್ನಿರಿ
ಹಾಡನು ಕೇಳುತ ತಿನ್ನಿರಿ ತಿನ್ನಿರಿ
ಈ ಊಟದ ಹಾಡಿನ ರಹಸ್ಯ ಕೇಳಿ
ಅತೀ ತಿನ್ನಬೇಡಿ, ನೀವು ತಿನ್ನದೇ ಇರಬೇಡಿ.
ಮಾಡೋಣ ಬನ್ನಿ ತಯಾರ ಮಾಡೋಣ ಬನ್ನಿ
ಬಣ್ಣದ ಜಿಲೇಬಿ, ಹಾಲಿನ ಮಲಾಯಿ
ಆಲೂ ಭಾಜಿ, ಸಮೋಸ ಕಚೋರಿ
ರಗಡಾ, ಪೆಟ್ಟೀಸ್, ಭೇಲ, ಮಸಾಲಾ
ಹಲವಾ, ಚುಡವಾ, ಜಾಮೂನ ಪೇಡಾ,
ಇನ್ನೇನು ಹೇಳಿ, ಇನ್ನೇನು ಕೇಳಿ,
ಪ್ರೇಮವು, ಸ್ನೇಹವು, ಬೆರೆಸುತ ತಿನ್ನಿ
ತಿನ್ನಿರಿ ತೇಗಿರಿ ಮಜಾ ಮಾಡಿ.

